## ಸಮತಾ ಉದ್ದೇಶ

★ ಮಹಿಳೆಗೆ ಶಿಕ್ಷಣ ನೀಡುವ ಮೂಲಕ ಆಕೆಯ ಮೇಲೆ ಹೊದಿಸಲಾಗಿರುವ "ಅಬಲೆ" ಎಂಬ ಮುಸುಕು ಕಿತ್ತೊಗೆಯುವುದು.

★ ಅವರಲ್ಲಿ ಸುಪ್ತವಾಗಿರುವ ಶಕ್ತಿ ಸಾಮರ್ಥ್ಯವನ್ನು ಜಗತ್ತಿಗೆ ಪರಿಚಯಿಸುವುದು ಮತ್ತು ಆಕೆಯ ಆತ್ಮವಿಶ್ವಾಸವನ್ನು ಹೆಚ್ಚಿಸುವುದು.

★ ಆರ್ಥಿಕ ಮತ್ತು ಸಾಮಾಜಿಕ ಅಭಿವೃದ್ಧಿಗಾಗಿ ಮಹಿಳೆಯರು ನೀಡುತ್ತಿರುವ ಕೊಡುಗೆಯನ್ನೂ ಸಮಾಜ ಗುರುತಿಸುವಂತೆ ಮಾಡುವುದು.

★ ತಮ್ಮ ನೋವು-ಸಂಕಟಗಳನ್ನು ಪರಸ್ಪರ ಹಂಚಿಕೊಂಡು ಪರಿಹಾರ ಕಂಡು ಕೊಳ್ಳಲು ಸಂಘಟಿತರಾಗಿ ಹೋರಾಡಲು ವೇದಿಕೆ ಒದಗಿಸುವುದು.

★ ಶೋಷಣೆಯ ಸಂಕೋಲೆಯಿಂದ ಬಿಡುಗಡೆ ಪಡೆಯಲು ಕುಟುಂಬದಿಂದ ಹಿಡಿದು ಸರ್ಕಾರದವರೆಗೆ ಎಲ್ಲಾ ಹಂತಗಳಲ್ಲಿ ನಿರ್ಣಾಯಕ ಪಾತ್ರ ವಹಿಸುವಂತೆ ಮಹಿಳೆಯರನ್ನು ರೂಪಿಸುವುದು, 'ಸಮತಾದ' ಉದ್ದೇಶಗಳು.

# ಹೊತ್ತಿತೋ ಹೊತ್ತಿತೋ
# ಅಕ್ಷರದ ದೀಪ



## ಸಮತಾ

**ಸಮತಾ**

ಭಾರತ ಜ್ಞಾನ ವಿಜ್ಞಾನ ಸಮಿತಿ

ಎಲೆಕ್ಟ್ರೋ ಕೆಮಿಕಲ್ ಸೊಸೈಟಿ ಆಫ್ ಇಂಡಿಯಾ

ಭಾರತೀಯ ವಿಜ್ಞಾನ ಮಂದಿರದ ಆವರಣ

ಬೆಂಗಳೂರು-560 012

"ಹೊತ್ತಿತೋ ಹೊತ್ತಿತೋ ಅಕ್ಷರದ ದೀಪ" ಎಂಬ ಮೂರು ಲೇಖನಗಳ ಸಂಕಲನವು "ಸಮತಾ" ಭಾರತ ಜ್ಞಾನ ವಿಜ್ಞಾನ ಸಮಿತಿ, ಎಲೆಕ್ಟ್ರೋ ಕೆಮಿಕಲ್ ಸೊಸೈಟಿ ಅಫ್ ಇಂಡಿಯಾ, ಭಾರತೀಯ ವಿಜ್ಞಾನ ಮಂದಿರದ ಆವರಣ, ಬೆಂಗಳೂರು-560 012 ಇವರ ಪ್ರಕಟಣೆ. ☎ 342384

ಮೊದಲನೆಯ ಮುದ್ರಣ : 1993

ಪುಟ : 32

ಬೆಲೆ : 4-00






ಮುದ್ರಕರು : ಭ್ರಮರಾ ಗ್ರಾಫಿಕ್ಸ್, ಬೆಂಗಳೂರು-54



## ಹೊತ್ತಿತೋ ಹೊತ್ತಿತೋ ಅಕ್ಷರದ ದೀಪ

"ಒಂದು ಪ್ರಶ್ನೆ, ಹಲಹಲವು ಪ್ರಶ್ನೆಗಳು" ಎಂಬ ಆಶಯದೊಂದಿಗೆ ಪ್ರಶ್ನಿಸಲು ಪ್ರೇರೇಪಿಸಿದ ಈ ಮೊದಲಿನ ಜಾಥಾಗಳ ನಂತರದ ಹೆಜ್ಜೆಯೇ "ಸಮತಾ"–ಸಾಕ್ಷರತೆ ಸಮಾನತೆಗಾಗಿ ಮಹಿಳಾ ಕಲಾಜಾಥಾ.

ಪ್ರಶ್ನೆ ಒಂದು ಬದುಕನ್ನು ಬದಲು ಮಾಡಬಲ್ಲದು ಎಂಬುದು ಭಾರತ ಜ್ಞಾನ ವಿಜ್ಞಾನ ಸಮಿತಿಯ ಅನುಭವ. ಕೇವಲ ಪ್ರಶ್ನಾರ್ಥಕ ಚಿನ್ಹೆಗಳಿಂದಲೇ ತುಂಬಿ ಹೋಗಿರುವ ಜನ ಸಾಮಾನ್ಯರ ಬದುಕನ್ನು ಬದಲು ಮಾಡಬಹುದಾದದ್ದು ಪ್ರಶ್ನಿಸುವ ಮನಸ್ಸು. ಈ ಕಾರಣಕ್ಕಾಗಿಯೇ ಖ್ಯಾತ ನಾಟಕಕಾರ, ಕವಿ ಬ್ರೆಕ್ಟ್ "ಪ್ರಶ್ನೆ ಕೇಳು ವುದಕ್ಕೆ ಹೆದರದಿರು ಒಡನಾಡಿ" ಎನ್ನುತ್ತಾನೆ.

ಬಾನಿನಲ್ಲಿ ಕಾಮನ ಬಿಲ್ಲು, ನೆತ್ತಿಯಮೇಲೆ ಥಳಥಳಿಸುವ ತಾರೆಗಳು ಏಕೆ ? ಆಕಾಶ ನೀಲಿ, ಗುಲಾಬಿ ಕೆಂಪು ಏಕೆ ? ಪುಟ್ಟದೊಂದು ಮಿಣುಕುಹುಳು, ಹೊಟ್ಟೆಯ ಲ್ಲೊಂದು ಟಾರ್ಚು, ಕಾಗೆ, ಪಾರಿವಾಳಗಳಂತೆ ಬೆಕ್ಕೇಕೆ ಹಾರಲಾರದು ಎಂಬ ಪ್ರಶ್ನೆ ಗಳಿಂದ ಆರಂಭವಾದ ಪ್ರಶ್ನೆಗಳು ಈಗ ಬಡತನ ಏಕೆ ? ನಿರಕ್ಷರತೆ ಏಕೆ ? ಹಸಿವು ಏಕೆ ? ಎಂಬಲ್ಲಿಗೆ ಬಂದು ನಿಂತಿದೆ.

ನಿರಕ್ಷರತೆ ಏಕೆ ? ಸಾಕ್ಷರತೆ ಸಾಕೆ ? ಎಂಬ ಪ್ರಶ್ನೆಯನ್ನು ಭಾರತ ಜ್ಞಾನ ವಿಜ್ಞಾನ ಸಮಿತಿ ತನ್ನ ಮುಂದಿಟ್ಟುಕೊಂಡಾಗ ಹೊಮ್ಮಿದ್ದು ಸಮತಾ ಮಹಿಳಾ ಕಲಾ ಜಾಥಾ.

ಅತಿ ಹೆಚ್ಚು ಅನಕ್ಷರಸ್ಥರನ್ನು ಹೊಂದಿರುವ ಭಾರತದಲ್ಲಿ ಮಹಿಳಾ ಸಾಕ್ಷರತೆಯ ಪ್ರಮಾಣ ಆತಂಕ ಹುಟ್ಟಿಸುತ್ತದೆ. ಭಾರತದ ಮಹಿಳಾ ಸಾಕ್ಷರಸ್ಥರ ಸಂಖ್ಯೆ ಕೇವಲ ಶೇ 39.4 ಮಾತ್ರ. ಅನಕ್ಷರಸ್ಥ ಪುರುಷರಿಗಿಂತ ಈ ಸಂಖ್ಯೆ ಎರಡು ಪಟ್ಟು ಹೆಚ್ಚು. ಅನಕ್ಷರತೆ ಮಹಿಳಾ ಶೋಷಣೆಗೆ ಮುಖ್ಯ ಕಾರಣವೂ ಆಗಿದೆ. ಅಕ್ಷರಸ್ಥ (ಸಾಕ್ಷರಸ್ಥ) ಮಹಿಳೆಗಿಂತ ಅನಕ್ಷರಸ್ಥ ಮಹಿಳೆ ಈಗ ಹೆಚ್ಚು ಶೋಷಿತಳು. ಭಾರತದಲ್ಲಿ ಮಹಿಳೆಯರು ಕೆಳದರ್ಜೆಯ ಸ್ಥಾನಮಾನ ಹೊಂದಲು, ಆಧುನಿಕ ಜಗತ್ತಿನ ದೌರ್ಜನ್ಯ ಗಳಿಗೆ, ಸಂಪ್ರದಾಯದ ಸಂಕೋಲೆಗೆ ಸಿಕ್ಕಿಹಾಕಿಕೊಳ್ಳಲು ಈ ಅನಕ್ಷರತೆಯೇ ಪ್ರಮುಖ ಕಾರಣವಾಗಿದೆ.

ಮಹಾತ್ಮಾ ಗಾಂಧಿ ಮಹಿಳೆಯರನ್ನು ಸಾಕ್ಷರರನ್ನಾಗಿ ಮಾಡುವ ಕನಸನ್ನು ಹೊಂದಿದ್ದರು. ಹೆಣ್ಣು ಕಲಿತರೆ ಬದಲಾಗುವ ಬದುಕಿನ ಬಗ್ಗೆ ಅವರು ಸ್ಪಷ್ಟ ನಿಲು ವನ್ನು ಹೊಂದಿದ್ದರು. "ಒಬ್ಬ ಪುರುಷ ಕಲಿತರೆ ಒಬ್ಬ ವ್ಯಕ್ತಿ ಮಾತ್ರ ಕಲಿತಂತೆ ಅದೇ ಒಬ್ಬ ಮಹಿಳೆ ಕಲಿತರೆ ಇಡೀ ಒಂದು ಕುಟುಂಬ ಕಲಿತಂತೆ" ಎಂದು ಗಾಂಧೀಜಿ ಸಾರಿ

ದ್ದರು. "ಹೆಣ್ಣೊಂದು ಕಲಿತರೆ ಶಾಲೆಯೊಂದು ತೆರೆದಂತೆ" ಎನ್ನುವುದು ಎಷ್ಟು ನಿಜ. ಜವಹರಲಾಲ್ ನೆಹರೂ ಮಹಿಳೆ ಬದಲಾದರೆ ಜಗತ್ತು ಬದಲಾದಂತೆ ಎನ್ನುತ್ತಿದ್ದರು.

"ಇಳೆಯಿಂದ ಮೊಳಕೆವೊಂದು ತಮಟೆಗಳಿಲ್ಲ, ತುತ್ತೂರಿ ದನಿಯಲ್ಲ, ಸೂರ್ಯ ಚಂದ್ರರದೊಂದು ಸದ್ದಿಲ್ಲ" ಎನ್ನುತ್ತಾರೆ ಕವಿ ಡಿ.ವಿ.ಜಿ. ಭೂಮಿಯ ಸತ್ವವನ್ನು ಹಸಿರಾಗಿ ಚಿಮ್ಮಿಸುವ ಮೊಳಕೆಗೆ ಹೇಗೆ ಸ್ವಾಗತ ಸಿಗಲಿಲ್ಲವೋ ಅಂತೆಯೇ ಮಹಿಳೆಗೂ ಹುಟ್ಟಿನಿಂದಲೇ ಮಹಿಳೆಗೆ ಸಿಗುವ ತಾತ್ಸಾರ ಶೋಷಣೆಯ ಮಡಿಲಲ್ಲಿ ಆಕೆ ಉಸಿರು ವಂತೆ ಮಾಡಿದೆ.

ಹೆಣ್ಣೊಂದು ಕಲಿಯುವುದು ಜೀವನ ಬದಲಾಗಲು ಇರುವ ದಾರಿ ಅದಕ್ಕಾಗಿಯೇ ಸಮತಾ ಸಾಕ್ಷರತೆಯ ಮೂಲಕ ಸಮಾನತೆಯತ್ತ ಹೆಜ್ಜೆ ಹಾಕುವ ಆಶಯವನ್ನು ಹೊಂದಿದೆ.

ಸಮತಾ ಮಹಿಳಾ ಕಲಾ ಜಾಥಾದ ಅಂಗವಾಗಿ ಸಮತಾ ರಾಜ್ಯ ಸಮಿತಿ ಪುಸ್ತಕ ಪ್ರಕಟಣೆ, ಆಡಿಯೋ ಕ್ಯಾಸೆಟ್‌ಗಳನ್ನು ಹೊರತರುವ ಉದ್ದೇಶವನ್ನು ಹೊಂದಿದೆ. ಈ ಸಂದರ್ಭದಲ್ಲಿ ಪ್ರಕಟಣೆಗೊಂಡಿರುವ ಈ ಕಿರು ಪುಸ್ತಕ ಭಾರತದಲ್ಲಿ ಸಾಕ್ಷರತೆಗೆ ಸಂಬಂಧಿಸಿದಂತೆ ಹೆಣ್ಣು ಮಕ್ಕಳು ಮತ್ತು ಮಹಿಳೆಯರ ಸ್ಥಿತಿ-ಗತಿಯ ಬಗ್ಗೆ ಕ್ಷ-ಕಿರಣ ಬೀರುವ ಒಂದು ಯತ್ನ. ಇಲ್ಲಿನ ಲೇಖನಗಳಿಗೆ ಮಾಹಿತಿಯನ್ನು ಸಂಗ್ರಹಿಸಿಕೊಟ್ಟ ಹಾಗೂ ಲೇಖನಗಳನ್ನು ಸಿದ್ಧಪಡಿಸಿದ ರಾಜ್ಯ ಸಮಿತಿ ಸದಸ್ಯರಿಗೆ 'ಸಮತಾ' ಅಭಾರಿಯಾಗಿದೆ.

— **ಸಮತಾ**



# ಹೊತ್ತಿತೋ ಹೊತ್ತಿತೋ ಅಕ್ಷರದ ದೀಪ

ಕು. ಎನ್. ಇಂದಿರಮ್ಮ

ಮಹಿಳೆ ಶತಮಾನಗಳಿಂದ ಶೋಷಿತೆ. ತನ್ನೆಲ್ಲಾ ಬದುಕನ್ನು ಪುರುಷನ ತೃಪ್ತಿಗಾಗಿ ಅರ್ಪಿಸಿದವಳು. ಮಹಿಳೆಯಿಂದ ಸುಖ ಸಂತೋಷ ನೆಮ್ಮದಿಯನ್ನು ಪಡೆದಿರುವ ಪಡೆಯುತ್ತಿರುವ ಪುರುಷ ಆಕೆಯನ್ನು ಭೋಗವಸ್ತುವಿನಂತೆ ಬಳಸುತ್ತಿರುವುದೇ ಹೆಚ್ಚು. ಗೃಹಬಂಧಿಯಾಗಿರುವ ಮಹಿಳೆ ಎಲ್ಲಾ ಸೌಲಭ್ಯಗಳಿಂದ ವಂಚಿತಳು. ಹೀಗಾಗಿ ಮಹಿಳೆ ಶಿಕ್ಷಣ ಸೌಲಭ್ಯದಿಂದಲೂ ವಂಚಿತಳಾದಳು. ಭಾರತ ದೇಶದಲ್ಲಿ ಮಹಿಳೆಯರ ಸಾಕ್ಷರತಾ ಪ್ರಮಾಣ ಕೇವಲ (ಶೇ 39.4%) ಅನಕ್ಷರತೆ ಅಜ್ಞಾನಕ್ಕೆ ಕಾರಣವಾಗಿ ವಿಧಿವಾದವನ್ನು ನಂಬುವಂತೆ ಮಾಡಿದೆ. ಮಹಿಳೆಯರಲ್ಲಿ ಕೀಳರಿಮೆ ಬೆಳೆಸಿದೆ. ಹಣೆ ಬರಹ ಎಂಬ ನಂಬಿಕೆಯಿಂದ ಮಹಿಳೆಯನ್ನು ಹೊರತರುವುದು ಈಗಿನ ತುರ್ತು ಅಗತ್ಯ.

ಮನೆಯೊಳಗೆ ನಾಲ್ಕು ಗೋಡೆಗಳ ಮಧ್ಯೆ ಕಾಲ ತಳ್ಳುತ್ತಿರುವ ಮಹಿಳೆಗೆ ಹೊರ ಬಂದರೆ ಅತ್ಯಾಚಾರದ ಭಯ, ಬುರ್ಕಾ, ಬಸವಿ. ದೇವದಾಸಿ, ಬೆತ್ತಲೆ ಸೇವೆಯಂತಹ ಅಮಾನವೀಯ ಆಚರಣೆಗಳು ಇಂದಿಗೂ ಜೀವಂತ. ವರದಕ್ಷಿಣೆ ಪಿಡುಗು ಮಹಿಳೆಯ ಸಾಂಸಾರಿಕ ಬದುಕಿನಲ್ಲಿ ಹಿಂಸೆ ತಂದಿಟ್ಟಿದೆಯಲ್ಲದೆ ವರ್ಷಕ್ಕೆ ಅನೇಕ ಸಾವಿರ ಮಹಿಳೆಯರನ್ನು ಬಲಿ ತೆಗೆದುಕೊಳ್ಳುತ್ತಿದೆ. ಹೆಣ್ಣು ಮಗು ಬಯಸದ ದಂಪತಿಗಳಿಂದ ಹೆಣ್ಣು ಭ್ರೂಣ ಹತ್ಯೆ ಆತಂಕಕಾರಿಯಾಗಿ ಹೆಚ್ಚಿದೆ.

ಇಂದಿನ ಇಂತಹ ಆತಂಕಕಾರಿ ಪರಿಸ್ಥಿತಿಯಲ್ಲಿ ಮಹಿಳೆಗೆ ಬದುಕನ್ನು ಧೈರ್ಯವಾಗಿ ಎದುರಿಸುವ ಆತ್ಮವಿಶ್ವಾಸ ಬರಬೇಕಾಗಿದೆ. ತನ್ನ ಶಕ್ತಿಯ ಅರಿವು ಅವಳಿಗೆ ಇಲ್ಲ. ಅವಳಿಗೆ ತಿಳಿದಿರುವುದು ಕೇವಲ ದುಡಿತ. ಸದಾ ತನ್ನ ಗಂಡ, ಮಕ್ಕಳು ಮನೆಯವರು ಹೀಗೆ ಬೇರೆಯವರ ಹಿತದ ಚಿಂತೆಯೇ ಅವಳಿಗೆ. ಆದರೆ ದುರ್ದೈವದಿಂದ ಆಕೆಯ ಶಕ್ತಿ ಗುರಿತಿಸಲ್ಪಡುತ್ತಿಲ್ಲ. ತನ್ನ ಶೋಷಣೆಯ ಕಾರಣ ಅವಳಿಗೆ ತಿಳಿದಿಲ್ಲ. ಸಮಾಜದಲ್ಲಿ ತಲೆತಲಾಂತರದಿಂದಲೂ ಅವಳಿಗೆ ಕಲ್ಪಿಸಿರುವುದು ಪುರುಷನ ನಂತರದ ಸ್ಥಾನವೇ. ಅವಳ ಬವಣೆಯನ್ನು ಪುರುಷವರ್ಗ ಅರ್ಥಮಾಡಿಕೊಳ್ಳುತ್ತಿಲ್ಲ. ದುಶ್ಚಟಗಳಿಗೆ ದಾಸರಾದ ಗಂಡಂದಿರಿಂದ ಇವಳ ದೈಹಿಕ ಶೋಷಣೆ ನಿರಂತರವಾಗಿ ನಡೆದಿದೆ. ಬಡತನದಿಂದ ಸರಿಯಾಗಿ ಆಹಾರ ಸಿಗುತ್ತಿಲ್ಲ. ಪದೇ ಪದೇ ಮಕ್ಕಳಾಗು

ವುದರಿಂದ ದೇಹದ ಆರೋಗ್ಯ ಕ್ಷೀಣಿಸಿದೆ. ಇಷ್ಟೆಲ್ಲಾ ಬದುಕಿನ ಜಂಜಡಗಳಿಂದ ಜರ್ಜರಿತಳಾಗಿರುವ ಮಹಿಳೆಗೆ ತನ್ನ ವಿದ್ಯಾಭ್ಯಾಸದತ್ತ ಗಮನ ಹರಿಸಲು ಸಮಯ ವೆಲ್ಲಿದೆ ? ಇಂತಹ ಪ್ರಕ್ರಿಯೆಗೆ ಅವಳನ್ನು ಪ್ರೋತ್ಸಾಹಿಸುವವರು ಯಾರು ?

ಹೀಗೆ ಎಲ್ಲಾ ಸವಲತ್ತುಗಳಿಂದ ದೂರವಾಗಿರುವ ಮಹಿಳೆಯ ವಿಮೋಚನೆ ಆಗ ಬೇಕಾಗಿದೆ. ಈ ಎಲ್ಲಾ ಸಂಕೋಲೆಗಳಿಂದ ಅವಳ ವಿಮೋಚನೆ ಆಗಬೇಕಾಗಿದೆ. ಇದು ಮಹಿಳಾ ಸಾಕ್ಷರತೆಯಿಂದ ಮಾತ್ರ ಸಾಧ್ಯವೆಂಬುದು ತುಂಬಾ ಸ್ಪಷ್ಟವಾಗಿದೆ. ಈಗಾಗಲೇ ನಮ್ಮ ದೇಶದಲ್ಲಿ ಕೋಟಿ ಕೋಟಿ ಸಂಖ್ಯೆಯಲ್ಲಿ ಮಹಿಳಾ ಅನಕ್ಷರಸ್ಥರಿ ದ್ದಾರೆ. ಇದುವರೆಗೆ ಅವರನ್ನು ಯಾವುದೇ ಶೈಕ್ಷಣಿಕ ಯೋಜನೆ ತೆಕ್ಕೆಗೆ ತೆಗೆದು ಕೊಳ್ಳುವ ಪ್ರಯತ್ನ ವಿಫಲವಾಗಿದೆ. ಸಂಖ್ಯೆ ಬೆಳೆಯುತ್ತಲೇ ಇದೆ.

ಆದರೆ 1988ರಲ್ಲಿ ಅಸ್ತಿತ್ವಕ್ಕೆ ಬಂದ ರಾಷ್ಟ್ರೀಯ ಸಾಕ್ಷರತಾ ಮಿಷನ್ ಅಕ್ಷರ ಕಲಿಕೆಯನ್ನು ಆಂದೋಲನ ಮಾದರಿಯನ್ನು ರೂಪಿಸಿಕೊಂಡು ಜನರಿಗೆ ನೀಡಲು ಯತ್ನಿಸುತ್ತಿದ್ದು ಸ್ವಾಗತಾರ್ಹ. ಇದಕ್ಕೆ ಕೇರಳ ರಾಜ್ಯದ ಎರ್ನಾಕುಲಂನಲ್ಲಿ ನಡೆದ ಆಂದೋಲನದ ಮಾದರಿ ಹಾದಿಯನ್ನು ಹಾಕಿಕೊಟ್ಟಿದ್ದನ್ನು ಯಾರೂ ಮರೆಯು ವಂತಿಲ್ಲ.

ಅಕ್ಷರ ಕಲಿಸುವ ಯೋಜನೆ, ಸಂಪೂರ್ಣ ಸಾಕ್ಷರತಾ ಆಂದೋಲನ ಅನಕ್ಷರಸ್ಥ ಸಮೂಹದ ಬಾಳಿಗೆ ಕೈದೀವಿಗೆಯಾಗಿ ಬಂದವು ಎಂದು ಹೇಳಿದರೆ ತಪ್ಪಾಗಲಾರದು. ಈ ಆಂದೋಲನವನ್ನು ದೇಶದ ನೂರು ಜಿಲ್ಲೆಗಳಲ್ಲಿ ಹಮ್ಮಿಕೊಳ್ಳಲಾಯಿತು. ಅದು ಹಲವಾರು ಜಿಲ್ಲೆಗಳಲ್ಲಿ ಯಶಸ್ಸನ್ನು ಕಂಡಿತು ಕೂಡ. ಇದರಡಿಯಲ್ಲಿ ಲಕ್ಷಾಂತರ ಸಂಖ್ಯೆಯಲ್ಲಿ ಜನ ಅಕ್ಷರಸ್ಥರಾದರು. ಸಂಪೂರ್ಣ ಸಾಕ್ಷರತಾ ಆಂದೋಲನದ ಮತ್ತೊಂದು ವೈಶಿಷ್ಟ್ಯವೆಂದರೆ ಇದರಲ್ಲಿ ಹೆಚ್ಚಿನ ಸಂಖ್ಯೆಯಲ್ಲಿ ಮಹಿಳೆಯರು ಪಾಲ್ಗೊಂಡಿದ್ದು ದೇಶದಾದ್ಯಂತ ಆಂದೋಲನಕ್ಕಾಗಿ ಶ್ರಮಿಸಿದವರಲ್ಲಿ ಮತ್ತು ಅಕ್ಷರಸ್ಥರಾದವರಲ್ಲಿ $\frac{2}{3}$ ಭಾಗದಷ್ಟು ಜನ ಮಹಿಳೆಯರು. ಇದು ಏನನ್ನು ಸೂಚಿಸು ತ್ತದೆ ? ಮಹಿಳೆಯರಿಗೆ ಸಾಕ್ಷರತೆಯ ಅವಶ್ಯಕತೆ ಇರಲಿಲ್ಲವೆಂದೆ ? ಇಲ್ಲ. ಅವರಿಗೆ ಅಂತಹ ಅವಕಾಶ ದೊರೆತಿರಲಿಲ್ಲ ಅಷ್ಟೆ. ಸಂಪೂರ್ಣ ಸಾಕ್ಷರತಾ ಆಂದೋಲನಗಳು ಇದನ್ನು ಕೊಡಲು ಮುಂದಾದವು. ಆಂದೋಲನದ ಪ್ರಚಾರದಲ್ಲಿ ದೊಡ್ಡ ಸಂಖ್ಯೆ ಯಲ್ಲಿ ಮಹಿಳೆಯರು ಭಾಗವಹಿಸಿದ್ದು ಅನಕ್ಷರಸ್ಥ ಮಹಿಳೆಯರಲ್ಲಿ ಆತ್ಮವಿಶ್ವಾಸ ಮೂಡಿಸಿತು. ಕಲಿಕೆಯ ಕೇಂದ್ರಗಳು ಮನೆಗಳೇ ಆದುದರಿಂದ, ಅದಕ್ಕಾಗಿಯೇ ದೂರ ಕ್ರಮಿಸಬೇಕಾದ ಪರಿಸ್ಥಿತಿ ಇಲ್ಲದ್ದರಿಂದ ಮಹಿಳೆಯರಿಗೆ ಇದು ಇಷ್ಟವಾಯಿತು.

ಸಾಂಸ್ಕೃತಿಕ ಪ್ರಕಾರವಾದ ಕಲಾಜಾಥಾಗಳು ತುಂಬಾ ಪರಿಣಾಮಕಾರಿಯಾಗಿದ್ದು ಮತ್ತೊಂದು ವಿಶೇಷ. ಅದರಲ್ಲಿ ಕಲಾವಿದರಾಗಿ ಭಾಗವಹಿಸಿದ ಮಹಿಳೆಯರು ಅನಕ್ಷರಸ್ಥ ಮಹಿಳೆಯರಲ್ಲಿನ ಕೀಳರಿಮೆ ಹೋಗಲಾಡಿಸಲು ಮತ್ತು ಅವಳಲ್ಲಿ ಆತ್ಮ ವಿಶ್ವಾಸ ಮೂಡಿಸಲು ನೆರವಾದರು. ಬೀದಿ ಬೀದಿಗಳಲ್ಲಿ ಪ್ರಚಾರ ಕೈಗೊಂಡ ಮಹಿಳೆಯರು ಪ್ರದರ್ಶಿಸಿದ ನಾಟಕ ರೂಪಕಗಳ ಪಾತ್ರಗಳಲ್ಲಿ ತಮ್ಮನ್ನೇ ಕಲ್ಪಿಸಿಕೊಂಡ ಮಹಿಳೆಯರಿಗೆ ಸಾಕ್ಷರತೆಯ ಮಹತ್ವ ತಿಳಿಯಿತು. ಪ್ರಯೋಜನ ಪಡೆಯಲು ತಕ್ಷಣ ಮುಂದಾದರು. ಸ್ಲೇಟು ಪುಸ್ತಕ ಹಿಡಿದು ಮನೆಬಿಟ್ಟು ಹೊರಬಂದರು. ಕಲಿಯಲು ಅನುವಾದರು. ಕಲಿಸುವವರಲ್ಲಿಯೂ ಹೆಚ್ಚಿನ ಸಂಖ್ಯೆಯಲ್ಲಿ ಮಹಿಳೆಯರು ಪಾಲ್ಗೊಂಡಿದ್ದು ಆಂದೋಲನದ ಮತ್ತೊಂದು ವಿಶೇಷ. ಹೀಗಾಗಿ ಮಹಿಳೆಯರಿಂದಲೇ ಕಲಿಯಲು ಅವರು ಹಿಂಜರಿಯಲಿಲ್ಲ. ದಿನನಿತ್ಯದ ಜೀವನದಲ್ಲಿ ಹಲವಾರು ಜಂಜಡ ಗಳಿದ್ದರೂ ಲೆಕ್ಕಿಸದೆ ಕಲಿಯುವ ಪ್ರಕ್ರಿಯೆಗೆ ಒಳಗಾದರು. ತಮ್ಮ ಜೀವನದಲ್ಲಿ ಬೆಳಕು ಕಂಡರು.

ಇಂದು ದೇಶದಾದ್ಯಂತ ಯಶಸ್ಸನ್ನು ಕಾಣುತ್ತಿರುವ ಆಂದೋಲನಗಳು ಮಹಿ ಳೆಯರ ಜೀವನದಲ್ಲಿ ತಂದುತಹ ಬದಲಾವಣೆಗಳು ಹಲವಾರು. ಅಂತಹ ಸಾವಿರಾರು ನಿದರ್ಶನಗಳು ಇಂದು ನಮ್ಮ ಮುಂದೆ ಜೀವಂತ. ಮಹಿಳೆಯರು ತಮ್ಮ ಶೋಷಣೆಗೆ ಕಾರಣ ತಿಳಿಯುವುದು ಮತ್ತು ಅದರ ವಿರುದ್ಧ ಸುಘಟನಾತ್ಮಕವಾಗಿ ಹೋರಾಟ ಮಾಡುವಂತೆ ಮಾಡುವುದು ಸಾಕ್ಷರತಾ ಆಂದೋಲನದ ಮುಖ್ಯ ಗುರಿ. ಇದು ಸಾಬೀತಾದದ್ದು ಆಂಧ್ರಪ್ರದೇಶದ ನೆಲ್ಲೂರು ಜಿಲ್ಲೆಯಲ್ಲಿ. ಸಾಕ್ಷರತಾ ಆಂದೋಲನ ದಲ್ಲಿ ಕಲಿತ ಮಹಿಳೆಯರಿಗೆ ಪಠ್ಯದಲ್ಲಿನ ಒಂದು ವಿಷಯ ಅವರ ಬದುಕನ್ನೇ ಬದಲಾಯಿ ಸಿತು. ಮದ್ಯಪಾನದಿಂದಾಗುವ ದುಷ್ಪರಿಣಾಮ ಮತ್ತು ಅದರ ವಿರುದ್ಧ ಹೋರಾ ಡಿದ ಮಹಿಳೆಯ ಕಥೆಯನ್ನು ಪಾಠದಲ್ಲಿ ಓದಿದ ಮಹಿಳೆಯರಿಗೆ ತಮ್ಮ ಬದುಕಿನಲ್ಲಿಯೇ ಇದು ಮಾರಿಯಂತೆ ಹೊಕ್ಕಿರುವುದು ಮನವರಿಕೆಯಾಯಿತು. ಹೋರಾಟಕ್ಕೆ ಮುಂದಾ ದರು. ಸಾವಿರಾರು ಸಂಖ್ಯೆಯಲ್ಲಿ ಸಂಘಟಿತರಾದರು. ಸುಮಾರು 50 ಸಾವಿರ ಮಹಿಳೆಯರು ಒಟ್ಟಾಗಿ ಜಿಲ್ಲಾಧಿಕಾರಿಯವರ ಕಛೇರಿಗೆ ಮುತ್ತಿಗೆ ಹಾಕಿದರು ಪರಿಣಾಮ ಇವತ್ತು ಕುಡಿತ ಇವರ ಬದುಕಿನಿಂದ ದೂರ, ನೆಮ್ಮದಿಯ ಬದುಕು ಅವರದಾಯಿತು.

"ಬಾ ಹೊರಗೆ ಬಾ"

ಮದ್ಯಪಾನಕ್ಕೆ ಧಿಕ್ಕಾರ

ಮಹಿಳೆ ಸ್ವಾಲಂಬಿಯಾಗುವಂತೆ ಮಾಡಲು ಆಂದೋಲನ ಸಹಕರಿಸಿದ ಇನ್ನೊಂದು ನಿದರ್ಶನ ತಮಿಳುನಾಡಿನ ಪುದುಕೋಟೆ ಜಿಲ್ಲೆಯದು. ಇಲ್ಲಿ ಕ್ವಾರಿಯಲ್ಲಿ ಕೆಲಸ ಮಾಡುತ್ತಿದ್ದ ಮಹಿಳೆಯರು ಅಕ್ಷರಸ್ಥರಾದ ನಂತರ ಈ ಕೆಲಸದ ಇಡೀ ಒಪ್ಪಂದವನ್ನು ಪಡೆದುಕೊಂಡು ತಾವೇ ನಡೆಸುತ್ತಿದ್ದಾರೆ. ಇದರಿಂದ ಕಮೀಷನ್ ಮುಂತಾದ ಹಣ ಉಳಿಕೆಯಾಗಿ ಕೆಲಸ ಮಾಡುತ್ತಿರುವವರ ಜೀವನದಲ್ಲಿ ಆರ್ಥಿಕ ಸ್ಥಿತಿ ಸುಧಾರಿಸಿ, ಅವರಲ್ಲಿ ಆತ್ಮವಿಶ್ವಾಸ ಮೂಡಿದೆ.

ಇಂದು ಅಕ್ಷರಸ್ಥರಾಗುತ್ತಿರುವ ಮಹಿಳೆಯರು ಸಾಮಾಜಿಕ ಚಟುವಟಿಕೆಗಳಲ್ಲಿ ತಮ್ಮನ್ನು ತಾವು ತೊಡಗಿಸಿಕೊಳ್ಳುತ್ತಿರುವುದು ಸ್ಪಷ್ಟವಾಗಿ ಕಾಣುತ್ತಿದೆ. ಅವರ ಮಕ್ಕಳನ್ನು ತಪ್ಪದೆ ಶಾಲೆಗೆ ಕಳುಹಿಸುತ್ತಿರುವುದು ಮೆಚ್ಚುವಂತಹದು. ಹೆಣ್ಣು ಮಕ್ಕಳನ್ನು ಶಾಲೆಗೆ ನೋಂದಾಯಿಸುತ್ತಿರುವುದು ಗೋಚರಿಸುತ್ತಿದೆ. ಶಾಲೆ ಬಿಡುತ್ತಿರುವವರ ಸಂಖ್ಯೆ ಕಡಿಮೆಯಾಗುತ್ತಿದೆ. ಪ್ರಾಥಮಿಕ ಶಿಕ್ಷಣದ ಸಾರ್ವತ್ರೀಕರಣದ ಕನಸು ನನಸಾಗುವಂತೆ ಕಾಣುತ್ತಿದೆ. ಅಕ್ಷರಸ್ಥ ತಂದೆತಾಯಿಗಳು ಇದಕ್ಕಾಗಿ ಶ್ರಮಿಸಬಹುದೆಂಬ ಆಶಾವಾದದ ಅಲೆ ಏಳುತ್ತಿದೆ.

ಅಕ್ಷರದಿಂದ ಆರೋಗ್ಯ ಸುಧಾರಣೆಯತ್ತ ಮಹಿಳೆಯರ ಗಮನ ಹರಿದಿದೆ. ಹೆಚ್ಚಿನ ಸಂಖ್ಯೆಯ ಮಹಿಳೆಯರು ತಮಗೆ ಅಥವಾ ತಮ್ಮ ಮನೆಯವರಿಗೆ ಕಾಯಿಲೆ ಆದರೆ ದೇವರನ್ನು ಅಥವಾ ಜ್ಯೋತಿಷ್ಯವನ್ನು ಆಶ್ರಯಿಸುವುದು ತಪ್ಪುತ್ತಿದೆ. ಎಲ್ಲರಿಗೂ ಆಸ್ಪತ್ರೆಯ ಸೌಲಭ್ಯದ ಬಗ್ಗೆ ಅರಿವಿದೆ. ರೋಗ ನಿರೋಧಕ ಲಸಿಕೆ ಇಂದಿನ ಮಕ್ಕಳ ಪ್ರಮುಖ ಅವಶ್ಯಕತೆ. ಮಹಿಳೆಗೆ ಇದರ ಸಂಪೂರ್ಣ ಪ್ರಯೋಜನ ತಿಳಿದಿದೆ. ಮಕ್ಕಳಿಗೆ ಇದನ್ನು ಸಮಯಕ್ಕೆ ಸರಿಯಾಗಿ ಕೊಡಿಸುತ್ತಿದ್ದಾರೆ. ಮಕ್ಕಳನ್ನು ಕಾಡುವ "ಅತಿಸಾರ"ದಂತಹ ರೋಗದ ಬಗ್ಗೆ. ಅದರ ಚಿಕಿತ್ಸೆಯ ಬಗ್ಗೆ ಅವಳಲ್ಲಿ ತಿಳುವಳಿಕೆ ಮೂಡಿದೆ. ಪರಿಸರ ಸಂರಕ್ಷಣೆಯಲ್ಲಿ ಮರಗಿಡಗಳ ಪಾತ್ರದ ಬಗ್ಗೆ ತಿಳಿದಿದೆ. ಇದಕ್ಕೆ ಸಾಕ್ಷಿಯೆಂದರೆ, ಆಂದೋಲನವು ಸರಬರಾಜು ಮಾಡಿದ ಸಸಿಗಳನ್ನು ತಾಮುಂದು ನಾಮುಂದು ಎಂದು ತೆಗೆದುಕೊಂಡು ಹೋಗಿ ಮನೆಗಳ ಮುಂದೆ ನೆಟ್ಟಿದ್ದು, ಇದರೊಟ್ಟಿಗೆ ಮಕ್ಕಳ, ಮನೆಯ. ಪರಿಸರದ ನೈರ್ಮಲ್ಯತೆಯ ಬಗ್ಗೆ ಅರಿವು ಮೂಡಿದೆ.

ಸಮಾಜದ ಹಲವು ಕಟ್ಟು ಕಟ್ಟಳೆಗಳು ಮತ್ತು ನಿರ್ಬಂಧನೆಗಳಿಗೆ ಒಳಗಾದವರಲ್ಲಿ ಮುಸ್ಲಿಂ ಮಹಿಳೆಯರೇ ಹೆಚ್ಚು, ಬುರ್ಕಾದ ಮುಸುಕು ತೆಗೆದು ಇಂದು ಕಲಿಕಾ ಕೇಂದ್ರಗಳಿಗೆ ಬರುವುದು ಅವರಿಗೆ ಸಾಧ್ಯವಾಗಿದೆ. ಚಿಕ್ಕನಾಯಕನಹಳ್ಳಿಯ ಒಂದು ಕಲಿಕಾಕೇಂದ್ರದಲ್ಲಿ ಕಲಿತ ಮುಸ್ಲಿಂ ಮಹಿಳೆಯರು ಇತರರಿಗೂ ಕಲಿಸಲು ಮುಂದಾಗಿದ್ದಾರೆ. ಅವರಲ್ಲಿ ಕೀಳರಿಮೆ ಹೋಗಿದೆ. ಪುರುಷರೊಟ್ಟಿಗೆ ಸಮಸ್ಯೆಗಳನ್ನು ಎದುರಿಸಿ ನಿಲ್ಲುವ ಸ್ಥೈರ್ಯ ಬಂದಿದೆ.

ಹಲವಾರು ಹಳ್ಳಿಗಳಲ್ಲಿ 5–10 ಜನ ಕಲಿತ ಮಹಿಳೆಯರು ತಾವೇ ಬರೆದ ಅರ್ಜಿಗಳೊಂದಿಗೆ ಕಛೇರಿಗಳಿಗೆ ಹೋಗಿ ಸಮಸ್ಯೆಗಳ ಬಗ್ಗೆ ಚರ್ಚಿಸಿದ್ದಾರೆ. ತುಮಕೂರು ಜಿಲ್ಲೆಯಲ್ಲಿ ಇಂತಹ ನೂರಾರು ಪತ್ರಗಳು ನವಸಾಕ್ಷರರಿಂದ ಜಿಲ್ಲಾಧಿಕಾರಿಗಳಿಗೆ

ಬರುತ್ತಿವೆ. ಹಟದ ಸ್ವಭಾವದ ಮಹಿಳೆಯರು ಸಮಸ್ಯೆ ಪರಿಹಾರವಾಗುವವರೆಗೂ ಪಟ್ಟುಬಿಡದೆ ಹೋರಾಡುತ್ತಿದ್ದಾರೆ.

ಮಹಿಳೆ ತನ್ನ ಕೆಲಸದಲ್ಲಿ ಕುಶಲತೆಯನ್ನು ಹೆಚ್ಚಿಸಿಕೊಂಡು ತನ್ನ ಆರ್ಥಿಕ ಸ್ಥಿತಿಯನ್ನು ಸುಧಾರಿಸಿಕೊಳ್ಳುವುದು ಆಂದೋಲನದಿಂದ ಸಾಧ್ಯವಾಗಿದೆ. ಉದಾಹರಣೆಗೆ ಹೊಲಿಗೆ ಮಾಡುತ್ತಿರುವ ಒಬ್ಬ ಅಕ್ಷರ ಕಲಿತ ಮಹಿಳೆ, ಹೊಲಿಗೆಯಲ್ಲಿರುವ ವಿವಿಧ ಮಾದರಿಗಳ ಬಗ್ಗೆ ಹೆಚ್ಚಿನ ವಿವರವಿರುವ ಪುಸ್ತಕದ ಬಗ್ಗೆ ಕೇಳುತ್ತಿದ್ದಾಳೆ. ಆಂದೋಲನವಲ್ಲಿ ಕ್ಷೇತ್ರ ವೀಕ್ಷಣೆ ಮಾಡುವಾಗ ಇಂತಹ ನೂರಾರು ನಿದರ್ಶನಗಳು ಕಾಣಸಿಗುತ್ತವೆ.

ಇದರ ಜೊತೆಗೆ ಅಕ್ಷರಸ್ಥರಾದ ಮಹಿಳೆಯರಿಗೆ ಬೇರೆ ಬೇರೆ ಜನರೊಂದಿಗೆ ಆತ್ಮವಿಶ್ವಾಸದಿಂದ ಬೆರೆತು ಮಾತನಾಡುವುದು ಆಂದೋಲನದಿಂದ ಸಾಧ್ಯವಾಗಿದೆ. ಸಾಕ್ಷರತಾ ಆಂದೋಲನದಲ್ಲಿ ಕಲಿತ ಪುಸ್ತಕಗಳ ಜೊತೆಗೆ ಮತ್ತೂ ಪುಸ್ತಕ ಕೇಳುವಂತಾಗಿಪ್ಪಾತೆ. ಅವರನ್ನು ಭೇಟಿ ಮಾಡಲು ಬಂದ ಅಧಿಕಾರಿಗಳೊಡನೆ ಧೈರ್ಯವಾಗಿ ಮಾತನಾಡಿ ಸಮಸ್ಯೆಗಳನ್ನು ಹೇಳಿಕೊಳ್ಳುವಂತಹ ಚಿತ್ರ ಕಾಣುತ್ತಿದೆ. ಇದೇ ಆಂದೋಲನ ಮಂಡ್ಯ ಜಿಲ್ಲೆಯ ಶ್ರೀರಂಗಪಟ್ಟಣದ ಇಬ್ಬರು ಮೂಕ ಸಹೋದರಿಯರಿಗೆ ಮಾತು ಕಲಿಸಿದ ನಿದರ್ಶನವಿದೆ. ಇವರಿಬ್ಬರೂ ಹುಟ್ಟು ಮೂಕರು. ಶಾಲೆಗೆ ಹೋಗಿ ಕಲಿಯಲಿಲ್ಲ. ಸಾಕ್ಷರತಾ ಆಂದೋಲನದ ತರಗತಿಗೆ ಹೋಗತೊಡಗಿದರು. ಪಾಠ ಕಲಿತಂತೆ ಓದುವ ಪ್ರಯತ್ನ ಮಾಡಲು ಮುಂದಾದರು. ಇದು ಅವರ ಮೂಕತನವನ್ನು ಹೋಗಲಾಡಿಸಿತು. ಮಾತನಾಡತೊಡಗಿದರು.

ಹೀಗೆ ಆಂದೋಲನ ಮಹಿಳೆಯರ ಜೀವನದಲ್ಲಿ ತಂದ ಬದಲಾವಣೆಗಳು ಹತ್ತು ಹಲವಾರು. ಇನ್ನು ಕಲಿಸಲು ಮುಂದಾದವರ ಸ್ವಭಾವದಲ್ಲಿ ಆದಂತಹ ಬದಲಾವಣೆಯ ಬಗ್ಗೆ ಹೇಳುವುದಾದರೆ, ಸ್ವಯಂ ಸೇವಾಸೇವೆಯ ಮೇಲೆ ಕಾರ್ಯ ನಿರ್ವಹಿಸಿದ ಇವರಿಗೆ ಸಮಾಜ ಸೇವೆಯ ತೃಪ್ತಿ ದೊರಕಿದೆ. ಒಳ್ಳೆಯ ಜೀವನಾನುಭವವಾಗಿದೆ. ಅವರಲ್ಲಿ ನಾಯಕತ್ವದ ಗುಣ ಬೆಳೆಯಲು ಅನುವು ಮಾಡಿಕೊಟ್ಟಿದೆ. ಪಾವಗಡ ಒಂದು ಸಣ್ಣ ಹಳ್ಳಿ, ರಾಂಪ್ರರದ ಸ್ವಯಂ ಸೇವಕಿ ಶೈಲಜಾ ಇದಕ್ಕೊಂದು ಉತ್ತಮ ನಿದರ್ಶನ. ಈಕೆಯು ತನ್ನ ತರಗತಿಯಲ್ಲಿ ಕಲಿಸಿದ್ದು ಸುಮಾರು ಮೂವತ್ತು ಜನ ಮಹಿಳೆಯರಿಗೆ ಪ್ರತಿಯೊಬ್ಬರನ್ನೂ ಪ್ರೀತಿಯಿಂದ ನಡೆಸಿಕೊಂಡ ಈಕೆ ತರಗತಿಯಲ್ಲಿ ಒಸ್ತು ತಂದು ಶಾಲೆಯ ವಾತಾವರಣವನ್ನು ಮೂಡಿಸುತ್ತಿದ್ದಳು, ಇಲ್ಲಿ ಕಲಿತ

ಮಹಿಳೆಯರು ಈ ದಿನ ತಾವೇ ಜಿಲ್ಲಾಧಿಕಾರಿಗಳಿಗೆ ಪತ್ರ ಬರೆಯುತ್ತಾರೆ. ಕುರುಬರ ಹಳ್ಳಿಯ ಜಯಮ್ಮ ತುಂಬಾ ಕಷ್ಟದಿಂದ ಜೀವನ ಸಾಗಿಸಿದರು. ತನ್ನ ಐದು ಜನ ಮಕ್ಕಳ ಲಾಲನೆ, ಪಾಲನೆ, ವಿದ್ಯಾಭ್ಯಾಸದ ಜಂಜಡದ ಜೊತೆಗೆ ಹತ್ತು ಜನರಿಗೆ ಕಲಿಸುವುದು ಕಷ್ಟವೆನಿಸಲೇ ಇಲ್ಲ. ಇಂತಹ ಅಕ್ಷರ ಕಲಿಸುವ ಸೇವೆ ಅವರ ಜೀವನದಲ್ಲಿ ಧನ್ಯತೆ ತಂದಿರುವುದು ಸ್ಪಷ್ಟ ಹೀಗೆ ದೇಶಾದ್ಯಂತ ನಡೆದಿರುವ, ನಡೆಯುತ್ತಿರುವ ಸಾಕ್ಷರತಾ ಆಂದೋಲನಗಳು ಮಹಿಳೆಯರ ಪಾಲಿಗೆ ಜಾಗೃತಿಯನ್ನು ತರುತ್ತಿರುವುದರ ಪರಿಣಾಮವಾಗಿ ಶತಮಾನಗಳಿಂದ ಶೋಷಿತ ಬದುಕನ್ನು ಸಾಗಿಸುತ್ತಿದ್ದ ಮಹಿಳೆ ಎಚ್ಚರಗೊಳ್ಳುತ್ತಿದ್ದಾಳೆ.

**ಹೊತ್ತಿತೋ ಹೊತ್ತಿತೋ ಅಕ್ಷರದ ದೀಪ**
**ಕಳೆಯಿತೋ ಕಳೆಯಿತೋ ಶತಮಾನಗಳ ಶಾಪ ..**

# "ಹೆಣ್ಣುಮಗು ಸಮಾನತೆಯ ಹಾದಿಯಲ್ಲಿ"......

ಶ್ರೀಮತಿ ಎನ್ ಗಾಯತ್ರೀದೇವಿ

ಕಮಲಿ, ಮನೆಗೆಲಸದ ನಂಜಿಯ ಮಗಳು; ಎಳೆಯ ಬಾಲಕಿ. ಬಾಲಕಿ ಎನ್ನುವುದಕ್ಕಿಂತ ಕೂಸು ಎನ್ನಬಹುದೇನೋ! ಈ ಆರು ವರ್ಷದ ಕೂಸು ಅಮ್ಮನೊಡನೆ ಮನೆಗೆಲಸಕ್ಕೆ ಹೋಗುವ ಎಲ್ಲ ಮನೆಗೂ ಹೋಗುತ್ತದೆ. ಅಮ್ಮನ ಮನೆಗೆಲಸದೊಡನೆ ಚಿಕ್ಕ ಪುಟ್ಟ ಸಹಾಯ ಮಾಡುತ್ತಾ ಕಾಲ ಕಳೆಯುವ ಕಮಲಿಗೆ ಶಾಲೆಯ ಪರಿಚಯವಿಲ್ಲ. ಆದರೂ ಮನೆಗೆಲಸದ ಮನೆಯ ಒಡೆಯರ ಮಕ್ಕಳು ಶಿಸ್ತಾಗಿ ಯೂನಿಫಾರಂ ಧರಿಸಿ ಶಾಲೆಗೆ ಹೊರಟಾಗ ಆಸೆಗಣ್ಣುಗಳಿಂದ ತನಗೆ ಸಿಗದ ಸುಖದ ಅನುಭವಕ್ಕಾಗಿ ಹಾತೊರೆಯುತ್ತಾಳೆ. ಗಂಡನ ದುಡಿಮೆಯಿಲ್ಲದೆ ತನ್ನೊಬ್ಬಳ ದುಡಿಮೆಯಿಂದಲೇ ಬದುಕಬೇಕಾದ ನಂಜಿಗೆ ಆಸೆಯಿದ್ದರೂ ಕಮಲಿಯನ್ನು ಶಾಲೆಗೆ ಹಾಕುವ ಸಾಮರ್ಥ್ಯವಿಲ್ಲ. ಕಷ್ಟಪಟ್ಟು ದುಡಿದ ಚೂರು ಪಾರು ಹಣದಿಂದ ಪೋಲಿ ಬಿದ್ದಿರುವ ಮಗನನ್ನು ಶಾಲೆಗೆ ಕಳುಹಿಸುತ್ತಿರುವ ನಂಜಿಗೆ ಕಮಲಿಯನ್ನು ಶಾಲೆಗೆ ಕಳುಹಿಸುವುದು ಕನಸಿನ ಮಾತೇ ಸರಿ. ಆದ್ದರಿಂದ ತನ್ನ ವೃತ್ತಿಯ ತರಬೇತಿಗೆ ಆ ಚಿಕ್ಕವಯಸ್ಸಿಗೆ ಅವಳನ್ನು ಎಳೆದುಕೊಂಡಿದ್ದಾಳೆ.

ರಾಜಮ್ಮ ಅಗರಬತ್ತಿ ಕಾರ್ಖಾನೆಯಲ್ಲಿ ಕಾರ್ಮಿಕಳು, ದಿನವೆಲ್ಲ ದುಡಿದರೂ ಹೊಟ್ಟೆಗೆ ಬಟ್ಟೆಗೆ ಸಾಲದ ಸಂಪಾದನೆ; ಜೊತೆಗೆ ಕುಡುಕ ಗಂಡನ ಸಹವಾಸದಲ್ಲಿ ಸುಖವಿಲ್ಲದಿದ್ದರೂ ಸಾಲು ಸಾಲು ಎಂಟು ಮಕ್ಕಳ ಸಂತತಿ. ಹಿರಿ ಮಗಳು ಗಂಗೆಗೆ ಈಗ ವಯಸ್ಸು ಕೇವಲ ಹತ್ತು ವರ್ಷ. ಹತ್ತು ವರ್ಷಕ್ಕೇ ಅವಳಿಗೆ ಐವತ್ತರ ಅನುಭವ. ತನಗಿಂತ ಕಿರಿಯರ ಲಾಲನೆ, ಪಾಲನೆಯ ಹೊಣೆ ಹೊತ್ತಿರುವ ಆ ಬಾಲಕಿಗೆ ಬಾಲ್ಯವೆಂಬುದು ಏನೆಂಬುದೇ ಗೊತ್ತಿಲ್ಲ. ತಂಗಿ, ತಮ್ಮಂದಿರೇ ಅವಳ ಆಟಿಕೆಗಳು. ಮನೆಗೆಲಸವೇ ಅವಳ ಆಟಗಳು. ದುಡಿಯಲು ಹೊರಗೆ ಹೋಗುವ ತಾಯಿಯ ಗೈರುಹಾಜರಿಯಲ್ಲಿ ಇಡೀ ಕುಟುಂಬವನ್ನು ಜೋಪಾನ ಮಾಡುವ ಬಾಲಕಿ ಗಂಗೆಗೆ ಹುಟ್ಟಿನಿಂದಲೇ ತಾಯ್ತನದ ತಯಾರಿ!

ಮನೆಯಲ್ಲೇ ಬೀಡಿಕಟ್ಟುವ ಷರೀಫಾ ಮತ್ತು ಅಹಮದ್ ದಂಪತಿಗಳ ಐದು ಮಕ್ಕಳಲ್ಲಿ ಹೆಣ್ಣಾದ ಸಾರಾ ಶಾಲೆಯ ಭಾಗ್ಯವನ್ನು ಕಾಣದವಳು. ತನ್ನ ಗ್ರಾಮದಿಂದ ಬಲು ದೂರ ಇರುವ ನಗರದ ಶಾಲೆಗೆ ತನ್ನ ಅಣ್ಣ ತಮ್ಮಂದಿರಂತೆ ಹೋಗಲಾಗದೆ ಮನೆಯಲ್ಲೇ ಉಳಿದ ಸಾರಾಗೆ ಹೊರಗಿನ ಜಗತ್ತಿನ ಹಲವಾರು ಅನುಭವಗಳನ್ನು ಕಳೆದುಕೊಂಡ ದುಃಖ ಕಾಡುತ್ತದೆ.

ಕಮಲಿ, ಗಂಗೆ ಸಾರಾ...... ಹೆಸರುಗಳು ಯಾವುದಾದರೇನು ? ವಿದ್ಯೆಯು ಅನುಕೂಲವಿಲ್ಲದ, ಅಸ್ತಿತ್ವವೇ ಮುಖ್ಯವೆನಿಸದ, ಕುಟುಂಬಕ್ಕೆ ಭಾರವೆನಿಸಿಕೊಳ್ಳುವ ಅಸಂಖ್ಯಾತ ಹೆಣ್ಣುಮಕ್ಕಳು ಇಂದು ನಮ್ಮ ಸಮಾಜದಲ್ಲಿದ್ದಾರೆ. ಸಮಾಜವೇ ಸೃಷ್ಟಿಸಿರುವ ಹೆಣ್ಣಿನ ಸಮಸ್ಯೆಗಳ ಬೃಹತ್ತಿಗೆ ಹೆದರಿ ಹೆಣ್ಣು ಜನ್ಮವನ್ನೇ ನಿರಾಕರಿಸುವ, ಅಲಕ್ಷಿಸುವ ಮತ್ತೂ ಹೆಚ್ಚೆಂದರೆ ಅಪಮಾನಿಸುವ ಪ್ರವೃತ್ತಿ ದಿನೇ ದಿನೇ ಹೆಚ್ಚುತ್ತಿದೆ.

1989ರ ಮೇ ತಿಂಗಳಲ್ಲಿ ದೆಹಲಿಯಲ್ಲಿ ಒಂದು ಹೃದಯ ಹಿಂಡುವ ಘಟನೆ ನಡೆಯಿತು. ಆರು ವರ್ಷದ ಬಾಲೆ ರೇಖಾ ಬಡಗಿ ರಾಧೇಶ್ಯಾಮ್ ಮತ್ತು ಆತನ ಹೆಂಡತಿ ಲಕ್ಷ್ಮಿಯ ಮಗಳು ಅವಳ ಕಾಲಿಗೊಂದು ಸಣ್ಣ ಗಾಯವಾಯಿತು. ಅಪ್ಪ, ಅಮ್ಮನ ಅಲಕ್ಷ್ಯದಲ್ಲಿ ಕೀವು ತುಂಬಿ ಗ್ಯಾಂಗ್ರೀನ್ ಆಗಿ ಕಾಲಿಗೆಲ್ಲ ಹಬ್ಬಿ ಬಲಗಾಲು ಕತ್ತರಿಸುವಲ್ಲಿಗೆ ಬಂದಿತು. ಆಗ ತಂದೆ ತಾಯಿಗಳಿಗೆ ಎದೆಯೊಡೆಯಿತು. ಎಲ್ಲಾ ನೆಟ್ಟಗಿದ್ದರೇ ಹೆಣ್ಣು ಮಕ್ಕಳಿಗೆ ಮದುವೆ ಮಾಡುವುದು ಕಷ್ಟ. ಹಾಗಿರುವಾಗ ಈ ಅಂಗವಿಕಲ ಮಗಳನ್ನು ಮುಂದೆ ಯಾರು ಮದುವೆಯಾಗುತ್ತಾರೆ, ಎಂದು ಯೋಚಿಸಿದರು. ಅವರ ಸೀಮಿತ ಚಿಂತನೆ ಹಾಗೂ ಸಾಮರ್ಥ್ಯಕ್ಕೆ ಕಡೆಗೂ ಉತ್ತರ ಕಂಡುಕೊಂಡರು. ಆರು ವರ್ಷದ ಮುದ್ದು ರೇಖಾಳನ್ನು ರಾತ್ರಿ ಉಣ್ಣೆ ಶಾಲಿನಲ್ಲಿ ತುರುಕಿ ಸುತ್ತಿ ಜಮುನಾ ನದಿಗೆ ಎಸೆದು ಬಂದರು. 'ಮಾತೃ ದೇವೋಭವ' 'ಪಿತೃ ದೇವೋಭವ' ಎಂಬ ನಾಡಿನಲ್ಲಿ ದೈವ ಮೃತ್ಯುದೇವತೆಯಾಗಿ ಕಾಡಿದ್ದು ಹೀಗೆ. ಇದು ಒಂದು ಬಿಡಿ ನಿದರ್ಶನವಷ್ಟೇ ಆದರೆ ಎಂಭತ್ತರ ದಶಕದಲ್ಲಿ ತಮಿಳುನಾಡಿನ ಉಸಲಮ್ ಪಟ್ಟಿಯಲ್ಲಿ ಕಳ್ಳರ ಜಾತಿಯೊಂದರಲ್ಲೇ ಆಗಷ್ಟೇ ಹುಟ್ಟಿದ ಸುಮಾರು 6000 ಹೆಣ್ಣು ಮಕ್ಕಳನ್ನು ಅವರ ತಾಯ್ತಂದೆಯರೇ ಕೊಂದಿದ್ದಾರೆ. ಈಗಲೂ ರಾಜಸ್ಥಾನದಲ್ಲಿ ಹೆಣ್ಣು ಶಿಶುಗಳನ್ನು ಕೊಲ್ಲುವ ಪದ್ಧತಿಯಿದೆ.

ತಮ್ಮ ಕರುಳ ಕುಡಿಯನ್ನೇ ಕರುಣೆಯಿಲ್ಲದೆ ನಿರ್ದಾಕ್ಷಿಣ್ಯವಾಗಿ ಕಿವುಚಿ ಹಾಕುವ ಈ ಪ್ರವೃತ್ತಿಯ ಹಿಂದಿನ ಪ್ರೇರಣೆ ಯಾವುದು? ಸಾಮಾನ್ಯವಾಗಿ ಈ ಪಾಶವೀ

ಕೃತ್ಯಕ್ಕೆ ಎರಡು ಮುಖ್ಯ ಕಾರಣಗಳನ್ನು ಗುರುತಿಸಬಹುದು : ಮೊದಲನೆಯದಾಗಿ ಹೆಣ್ಣಿನ ಬಗ್ಗೆ ಸಮಾಜ ತಾಳಿರುವ ಪಕ್ಷಪಾತ ಧೋರಣೆ. ಅವಳನ್ನು ಕುಟುಂಬದ ಹೊರೆಯಾಗಿ, ಶಾಪವಾಗಿ ಪರಿಗಣಿಸಿರವ ಸ್ಥಿತಿ. ಮತ್ತೊಂದು ಪುತ್ರನ ಹುಟ್ಟಿಗಿರುವ ಅತಿಶಯವಾದ ಪ್ರಾಶಸ್ತ್ಯ.

ಭಾರತದಲ್ಲಿ ಹೆಣ್ಣು ಮಗುವಿನ ಚಿತ್ರ ಅತ್ಯಂತ ನಿರಾಶಾದಾಯಕವಾಗಿದೆ. ಹೆಣ್ಣು ಭ್ರೂಣ ಹತ್ಯೆಯಿಂದ ಶಿಶುಹತ್ಯೆಯವರೆಗೆ, ಅಪೌಷ್ಟಿಕತೆ, ಆರೋಗ್ಯ ಹೀನತೆಯಿಂದ ನಿರಕ್ಷರತೆಯುವರೆಗೆ, ಬಾಲ್ಯ ವಿವಾಹ, ಬಸಿರು ಬಾಣಂತನದಿಂದ ಅತ್ಯಾಚಾರ, ವಧು ದಹನದವರೆಗೆ ಈ ದೇಶದ ಹೆಣ್ಣಿನ ಭವಿಷ್ಯ ಹರಡಿಕೊಂಡಿದೆ. ಒಟ್ಟಿನಲ್ಲಿ ಕುಟುಂಬವೇ ಹೆಣ್ಣು ಮಕ್ಕಳ ಪಾಲಿಗೆ ಸೆರೆಮನೆ ಮತ್ತು ದುಡಿಮೆಯ ಕ್ಷೇತ್ರವಾಗಿದೆ.

ಭಾರತದಲ್ಲಿ ಪ್ರತಿ ವರ್ಷ ಹುಟ್ಟುವ 12 ಮಿಲಿಯನ್ ಹೆಣ್ಣುಮಕ್ಕಳಲ್ಲಿ 1.5 ಮಿಲಿಯನ್ ಹೆಣ್ಣು ಮಕ್ಕಳು ಮೊದಲ ಹುಟ್ಟುಹಬ್ಬವನ್ನು ಮುಗಿಸುವುದರೊಳಗೆ ಸಾಯುತ್ತಾರೆ. ಐದು ವರ್ಷ ತುಂಬುವುದರೊಳಗೆ 855,000 ಹೆಣ್ಣು ಮಕ್ಕಳು ಸಾಯುತ್ತಾರೆ. 15 ವರ್ಷ ತುಂಬುವ ವೇಳೆ ಕೇವಲ 9 ಮಿಲಿಯನ್ ಹೆಣ್ಣು ಮಕ್ಕಳು ಬದುಕುಳಿದಿರುತ್ತಾರೆ. ಈ ಕಾರಣಗಳಿಂದಲೇ ಒಟ್ಟಾರೆ ಭಾರತದ ಜನಸಂಖ್ಯೆಯಲ್ಲಿ ಹೆಂಗಸರಿಗಿಂತ ಪುರುಷರು 25 ಮಿಲಿಯನ್‌ರಷ್ಟು ಹೆಚ್ಚಿನ ಸಂಖ್ಯೆಯಲ್ಲಿದ್ದಾರೆ. ಈ ಜನಸಂಖ್ಯೆಯ ಏರು ಪೇರು ಸಾಮಾಜಿಕವಾಗಿ ದುಷ್ಪರಿಣಾಮ ಬೀರುತ್ತಿಲ್ಲವೇ ? ಹೆಚ್ಚುತ್ತಿರುವ ಪುರುಷರ ಸಂಖ್ಯೆ ವೇಶ್ಯಾಪದ್ಧತಿಗೆ ಪೂರಕವಾದರೆ ಆಶ್ಚರ್ಯವಿಲ್ಲ.

ಹೆಣ್ಣು ಮಗುವಿಗೆ ಸಮಾಜ ತೋರಿಸುವ ಅನಾದರ ಅವರ ಅಸ್ತಿತ್ವಕ್ಕೆ ಕಂಟಕ ಪ್ರಾಯವಾಗಿ ಪರಿಣಮಿಸಿದೆ. 'ಬಾಲಕರಿಲ್ಲದ ಬಾಲಿದ್ಯಾತರ ಜನ್ಮ ಬಾಡಿಗೆ ಎತ್ತು ದುಡಿದ್ಹಂಗ' ಎಂದುಕೊಂಡ ಸಮಾಜ ಬಾಲಕರಿಗೆ ಕೊಟ್ಟ ಪ್ರಾಶಸ್ತ್ಯ ಬಾಲಕಿಯರ ಜೀವಕ್ಕೇ ಕುತ್ತು ತಂದಿದೆ. ಮಕ್ಕಳನ್ನು ದೇವರು ಕೊಟ್ಟ ವರವೆಂದೆಣಿಸಿದ ಕುಟುಂಬ ವಂಶೋದ್ಧಾರಕನ ಆಗಮನಕ್ಕಾಗಿ ಹಲವಾರು ಸಂತತಿಗಳನ್ನು ಹುಟ್ಟಿಸಿಕೊಳ್ಳುತ್ತಲೇ ಸಾಗಿತು. ಇದರಿಂದ ತಾಯಿಯ ಅನಾರೋಗ್ಯದ ಜೊತೆಗೆ ದೇಶದ ಜನಸಂಖ್ಯೆಯ ಸಮಸ್ಯೆಯೂ ಹೆಚ್ಚಿತು. ಕುಟುಂಬದ ಹಾಗೂ ದೇಶದ ಆರ್ಥಿಕ ಸ್ಥಿತಿಯೂ ಹದ ಗೆಟ್ಟಿತು. ಆದರೆ ಈಗ ಕಾಲ ಬದಲಾಗಿದೆ. ದೇಶದ ಸಾಮಾಜಿಕ, ಆರ್ಥಿಕ ನೀತಿಯಲ್ಲಿ ಕುಟುಂಬ ಯೋಜನೆಗೆ ಮೊದಲ ಪ್ರಾಶಸ್ತ್ಯ ಸಿಕ್ಕಿದೆ. ಜೀವನ ತುಟ್ಟಿಯಾಗಿರುವುದ

ರಿಂದಲೂ ಬಹು ಮಕ್ಕಳ ಕುಟುಂಬ ಸಿಂಹಸ್ವಪ್ನವಾಗಿದೆ. ಹೀಗಿದ್ದರೂ ಗಂಡು ಮಕ್ಕಳಿಗಾಗಿ ಹಾಹಾಕಾರ ನಿಂತಿಲ್ಲ. ವಿದ್ಯಾವಂತರಲ್ಲಿಯೂ ಈ ಪ್ರವೃತ್ತಿ ಹೆಚ್ಚು ಹೆಚ್ಚಾಗಿ ಕಂಡು ಬರುತ್ತಿರುವುದು ಶೋಚನೀಯವೇ ಸರಿ.

ಪುತ್ರನ ಜನನಕ್ಕೆ ಭಾರತೀಯ ಸಂಸ್ಕೃತಿಯಲ್ಲಿ ಇರುವಷ್ಟು ಪ್ರಾಶಸ್ತ್ಯ ಮತ್ತೆಲ್ಲಿಯೂ ಇಲ್ಲ. ಋಗ್ವೇದದಲ್ಲಿಯೇ ಪುತ್ರನ ಹುಟ್ಟಿಗೆ ವಿಶೇಷ ಪ್ರಾರ್ಥನೆ ನಡೆಸುವುದರ ಉಲ್ಲೇಖವಿದೆ. ಪಿತೃಗಳಿಗೆ ಪಿಂಡವನ್ನಿಡುವ ಅಧಿಕಾರವನ್ನು ಪುತ್ರನಿಗೆ ಮಾತ್ರ ಕೊಟ್ಟಿದ್ದರಿಂದ ಅವನ ಹುಟ್ಟಿಗೆ ಪ್ರಾಶಸ್ತ್ಯ ಹೆಚ್ಚಿತು. ಪಾಪ-ಪುಣ್ಯಗಳ ಕಲ್ಪನೆ, ಸ್ವರ್ಗ ನರಕದ ಕಲ್ಪನೆ ಜನರ ಮನಸ್ಸಿನಲ್ಲಿ ಹೆಚ್ಚಿದಷ್ಟೂ ಮಗ ಹೆಚ್ಚು ಮುಖ್ಯನಾಗಿ ಗೋಚರಿಸಿದ ಅವನು ಮುಕ್ತಿ ಮಾರ್ಗಕ್ಕೆ ಕರೆದೊಯ್ಯುವ ನಾವೆಯಾದ. ವಿವಾಹದ ಉದ್ದೇಶವೂ ಪ್ರಮುಖವಾಗಿ ಪುತ್ರ ಪ್ರಾಪ್ತಿಗಾಗಿಯೇ ಎಂದಾಯಿತು. ಹೆಣ್ಣು ಮಕ್ಕಳ ಜನನವನ್ನು ಕೆಟ್ಟ ಅದೃಷ್ಟವೆಂದು ಬಗೆಯಲಾಗಿತ್ತು. ಮುಕ್ತಿ ಮಾರ್ಗವನ್ನು ತೋರಿಸುವುದಷ್ಟೇ ಅಲ್ಲದೆ ವಂಶವನ್ನು ಬೆಳೆಸುವ, ಹಾಗೂ ಹುಟ್ಟಿದ ವಂಶಕ್ಕೆ ಕೀರ್ತಿ ತರುವ ಗುರುತರವಾದ ಹೊಣೆ ಹೊತ್ತವನು ಮಗ. ಮುಪ್ಪಿನ ಕಾಲಕ್ಕೆ ಗಂಡು ಮಕ್ಕಳು ಸಾಮಾಜಿಕ ರಕ್ಷೆಯಂತೆ ಎಂದು ಭಾವಿಸುವ ಸಮಾಜ ಗಂಡು ಮಗುವಿಗಾಗಿ ತಹತಹಿಸುವುದು ಕಂಡು ಬರುತ್ತದೆ.

ಆಧುನಿಕ ಯುಗದಲ್ಲೂ ಗಂಡು ಮಗನ ಹುಟ್ಟಿಗಿರುವ ಪ್ರಾಮುಖ್ಯತೆ ಕಡಿಮೆಯಾಗಿಲ್ಲ. ವಿದ್ಯಾವಂತ ಮಂದಿ ಕೂಡ ಗಂಡು-ಹೆಣ್ಣು ಎಂಬ ಪದಗಳನ್ನು ಲಾಭ-ನಷ್ಟಗಳೆಂಬುದಕ್ಕೆ ಸಂಕೇತ ಪದಗಳನ್ನಾಗಿ ಬಳಸುವುದುಂಟು. ಹುಟ್ಟಿದ ಮಗನಿಗೆ ವಿದ್ಯಾಭ್ಯಾಸ ಕೊಡಿಸಿ, ಅದಕ್ಕೆ ಖರ್ಚು ಮಾಡಿರುವಷ್ಟು ಹಣವನ್ನು ವರದಕ್ಷಿಣೆಯಾಗಿ ಪಡೆದು ಮುಪ್ಪಿನ ಕಾಲದಲ್ಲಿ ತಮ್ಮೊಂದಿಗೆ ಉಳಿಯಬೇಕೆಂದು ಬಯಸುವ ಗಂಡು ಮಗನನ್ನು ಹೆತ್ತೊಡಲು ಲಾಭವೆಂದೇ ಪರಿಗಣಿಸುತ್ತದೆ. ಮಗಳಿಗೆ ವಿದ್ಯಾಭ್ಯಾಸ ಕೊಡಿಸಿ ಉದ್ಯೋಗ ದೊರೆತರೂ ವಿವಾಹದ ಖರ್ಚು, ವರದಕ್ಷಿಣೆಯ ಖರ್ಚನ್ನು ಸರಿತೂಗಿಸಿ ಮುಂದೆ ಮಗಳಿಗಾಗಬಹುದಾದ ಎಲ್ಲ ತಾಪತ್ರಯಗಳಿಗೂ ಒದ್ದಾಡಬೇಕಾದ ಪೋಷಕರು ಸಹಜವಾಗಿಯೇ ಹೆಣ್ಣು ಮಗುವನ್ನು ನಷ್ಟವೆಂದು ಭಾವಿಸುತ್ತಾರೆ.

ಇಂದು ವಿಜ್ಞಾನದಲ್ಲಿ ಅಪಾರ ಬೆಳವಣಿಗೆಯಾಗಿದೆ. ಮನುಕುಲದ ಉನ್ನತಿಗೆ ಸಾಧನವಾಗಬೇಕಾದ ವಿಜ್ಞಾನ ದುರುಪಯೋಗಕ್ಕೆ ಸಿಕ್ಕಿ ಮಾನವೀಯತೆಯ ನಾಶಕ್ಕೆ ಸಹಕಾರಿಯಾಗಿದೆ. ಭಾರತ ಸರ್ಕಾರ ಕುಟುಂಬ ಯೋಜನೆಯನ್ನು ರಾಷ್ಟ್ರೀಯ

ಕಾರ್ಯಕ್ರಮವನ್ನಾಗಿ ಮಾಡಿಕೊಂಡ ನಂತರ 1971ರಲ್ಲಿ ವೈದ್ಯಕೀಯವಾಗಿ ಗರ್ಭವನ್ನು ನಿವಾರಿಸುವ ಕಾಯಿದೆಯನ್ನು ಸಂಸತ್ತು ಮಾಡಿತು. ಬೇಡದ ಗರ್ಭವನ್ನು ಧರಿಸಿ, ತಾಯಿಯಾಗುವುದಕ್ಕಿಂತ ಮತ್ತು ಗರ್ಭವನ್ನು ರಹಸ್ಯವಾಗಿ ನಿವಾರಿಸಿಕೊಳ್ಳಲು ಅನಾರೋಗ್ಯಕರ ಕ್ರಮಗಳನ್ನು ಅನುಸರಿಸಿ ತನ್ನ ಜೀವಕ್ಕೆ ಅಪಾಯ ತಂದುಕೊಳ್ಳುವುದಕ್ಕಿಂತ ಕಾನೂನು ಸಮ್ಮತವಾಗಿ ಉತ್ತಮ ವೈದ್ಯಕೀಯ ನೆರವಿನಿಂದ ಗರ್ಭಪಾತ ಮಾಡಿಸಿಕೊಳ್ಳುವುದು ಆರೋಗ್ಯದ ದೃಷ್ಟಿಯಿಂದಲೂ, ಸಮಾಜದ ದೃಷ್ಟಿಯಿಂದಲೂ ಸ್ವಾಗತಾರ್ಹ. ಆದರೆ ಈ ಕಾಯಿದೆಯ ಲಾಭವನ್ನು ಇತ್ತೀಚೆಗೆ ದುರುಪಯೋಗಪಡಿಸಿಕೊಳ್ಳಲಾಗುತ್ತಿದೆ.

ಹೆರಿಗೆಗೆ ಮುಂಚೆ ತಾಯಿಯ ಭ್ರೂಣದ ಪರೀಕ್ಷೆ (ಅಮ್ನಿಯೋಸಿಂಥಿಸಿಸ್) ನಡೆಸುವುದನ್ನು ಭ್ರೂಣದ ವಿಕಲತೆಯನ್ನು ಕಂಡುಹಿಡಿಯಲು ನಡೆಸಲಾಗುತ್ತಿತ್ತು. ಆದರೆ ಅಮ್ನಿಯೋಸಿಂಥಿಸಿಸ್ ಪರೀಕ್ಷೆಯನ್ನು ಮುಖ್ಯವಾಗಿ ಲಿಂಗ ನಿರ್ಧಾರಕ್ಕಾಗಿ ಈಗ ಬಳಸಿಕೊಳ್ಳಲಾಗುತ್ತಿದೆ. ಸಾಮಾನ್ಯವಾಗಿ ಹೆಣ್ಣನ್ನು ಕುಟುಂಬದ ಹೊರೆಯಾಗಿ ಶಾಪವಾಗಿ ಭಾವಿಸುವ ಸಮಾಜ ಹೆಣ್ಣು ಮಗುವನ್ನು ನಿವಾರಿಸಿಕೊಳ್ಳಲು ಈ ಪರೀಕ್ಷೆಯ ಲಾಭ ಪಡೆಯುತ್ತದೆ. ಸ್ತ್ರೀ ಭ್ರೂಣಹತ್ಯೆಯ ಅಂಕಿ ಎಂತಹವರನ್ನಾದರೂ ಗಾಭರಿಗೊಳಿಸುವಂತಹುದು. ಮುಂಬಯಿಯ ಆಸ್ಪತ್ರೆಯೊಂದರಲ್ಲೇ 1984-85 ರಲ್ಲಿ 16,000 ಸ್ತ್ರೀ ಭ್ರೂಣಹತ್ಯೆಗಳು ನಡೆದುದಾಗಿ ವರದಿಯಾಗಿದೆ. (ಗಾರ್ಡಿಯನ್ 4-11-86). 1978 ರಿಂದ 1983 ರವರೆಗೆ ಸ್ಥೂಲವಾಗಿ ದೊರಕಿರುವ ಅಂಕಿ ಅಂಶಗಳ ಪ್ರಕಾರ, ಭಾರತದಲ್ಲಿ 78,000 ಸ್ತ್ರೀ ಭ್ರೂಣ ಹತ್ಯೆಗಳು ನಡೆದಿವೆ. ಮಹಾರಾಷ್ಟ್ರ ಆರೋಗ್ಯ ಕಲ್ಯಾಣ ಇಲಾಖೆಯು ರಾಜ್ಯದಲ್ಲೆಲ್ಲಾ ಇಂತಹ 248 ಆಸ್ಪತ್ರೆಗಳು ಹರಡಿಕೊಂಡಿವೆ ಎಂದು ಅಭಿಪ್ರಾಯ ಪಟ್ಟಿದೆ.

ಸ್ತ್ರೀ ಭ್ರೂಣಹತ್ಯೆಗಿದ್ದ ಬೇಡಿಕೆಯನ್ನು ಕಂಡು ಲಿಂಗ ನಿರ್ಧರಿಸುವ ಆಸ್ಪತ್ರೆಗಳು ನಾಯಿ ಕೊಡೆಗಳಂತೆ ಎಲ್ಲೆಲ್ಲೂ ಕಾಣಿಸಿಕೊಳ್ಳುತ್ತಿವೆ. ಈ ಹೆಣ್ಣು ಭ್ರೂಣ ಹತ್ಯೆಗೆ ಸಂಬಂಧಪಟ್ಟಂತೆ ಬೊಂಬಾಯಿಯಲ್ಲಿ ಕೆಲವೆಡೆ ಕಂಡುಬರುವ ಜಾಹೀರಾತುಗಳು ಇಡೀ ಸ್ತ್ರೀ ಕುಲಕ್ಕೆ ಅಪಮಾನ ಮಾಡುವಂತಹುದು ಆಗಿದೆ. "ಈಗಾದರೆ ಕೇವಲ 500, ನಂತರವಾದರೆ 5 ಲಕ್ಷ" ಎಂಬಂತಹ ಶೀರ್ಷಿಕೆಗಳು ದಂಪತಿಗಳನ್ನು ಮರುಳು ಮಾಡುತ್ತವೆ. ಅಷ್ಟೇ ಅಲ್ಲ ಈ ಒಂದು ಸಾಲಿನಲ್ಲಿರುವ ವಾಕ್ಯವತ್ತು ಭಾರತೀಯ ಮಹಿಳೆಯ ಸ್ತ್ರೀತ್ವದ ಹಣೆಬರೆಹವನ್ನು ದಾಖಲು ಮಾಡುತ್ತದೆ. ಸಮಾಜ ವಿಜ್ಞಾನಿ

ಗಳು ಅಮ್ನಿಯೋ ಸಿಂಥಿಸಿಸ್‌ನೊಂದಿಗೆ ನಡೆಯುವ ಗರ್ಭಪಾತ ಈಗಾಗಲೇ ಇರುವ ಸ್ತ್ರೀ-ಪುರುಷ ಪ್ರಮಾಣವನ್ನು ಇನ್ನೂ ಕೆಳಗಿಳಿಸುತ್ತದೆ ಎಂದು ಆತಂಕ ಪಡುತ್ತಾರೆ. ಇಂದು ಭಾರತದಲ್ಲಿ 933 ಸ್ತ್ರೀಯರಿಗೆ 1000 ಜನ ಪುರುಷರಿದ್ದಾರೆ. ಈ ರೀತಿ ಯಲ್ಲಿ ಸ್ತ್ರೀ ಭ್ರೂಣಹತ್ಯೆಗಳು ನಿರಂತರವಾಗಿ ನಡೆದರೆ ಆಗ ಸಮಾಜದಲ್ಲಿರುವ ಪುರುಷರ ಸಂಖ್ಯೆಗೆ ಹೋಲಿಸಿದಾಗ ಸ್ತ್ರೀಯರ ಸಂಖ್ಯೆಯು ಕಡಿಮೆಯಾಗಿ ಮುಂದೆ ಸಮಾಜದಲ್ಲಿ ಬಹುಪತಿತ್ವ, ಅತ್ಯಾಚಾರ ಹಾಗೂ ವೇಶ್ಯಾವೃತ್ತಿ ಹೆಚ್ಚಾಗಬಹುದು ಎಂದು ಸಮಾಜ ವಿಜ್ಞಾನಿಗಳು ಅಭಿಪ್ರಾಯಪಡುತ್ತಾರೆ. ಈ ಎಲ್ಲದರ ಹಿನ್ನೆಲೆಯಲ್ಲಿ ಹೆಣ್ಣಿನ ಅಸ್ತಿತ್ವಕ್ಕೆ ಧಕ್ಕೆ ತಂದಿರುವ ಮತ್ತು ಹೆಣ್ಣಿನ ಘನತೆಗೆ ಅಪಮಾನ ಮಾಡುವ ಸ್ತ್ರೀ ಭ್ರೂಣಹತ್ಯೆಯ ವಿರುದ್ಧ ಕಾನೂನು ಕ್ರಮತೆಗೆದುಕೊಳ್ಳುವಂತೆ ಒತ್ತಾಯಿಸಲು ಜನಾಂದೋಲನದ ಅವಶ್ಯಕತೆಯಿದೆ.

ಹೀಗೆ ಜನ್ಮ ತಾಳುವ ಮೊದಲೇ ಹೊರಜಗತ್ತಿನ ಅವಕೃಪೆಗೆ ತುತ್ತಾಗುತ್ತಿರುವ ಇಂದಿನ ಹೆಣ್ಣು ಮಕ್ಕಳು ಬಾಲ್ಯ ಕಳೆದುಕೊಂಡಿದ್ದಾರೆ. ಗಂಡುಮಕ್ಕಳಿಗೆ ದೊರೆಯುವ ಸೌಲಭ್ಯ, ಪ್ರಾಶಸ್ತ್ಯಗಳು ಹೆಣ್ಣುಮಕ್ಕಳಿಗೆ ಮರೀಚಿಕೆಯಾಗಿವೆ. ಭಾರತದ ಒಟ್ಟು ಮಕ್ಕಳ ಸಂಖ್ಯೆಯಲ್ಲಿ ಅರ್ಧದಷ್ಟು ಹೆಣ್ಣು ಮಕ್ಕಳಿದ್ದಾರೆ, ಆದರೆ ಅವರ ಬೆಳವಣಿಗೆ ಮತ್ತು ಅಭಿವೃದ್ಧಿ ಉಳಿದರ್ಧ ಭಾಗವಾದ ಗಂಡು ಮಕ್ಕಳಿಗಿಂತಲೂ ಕಳಪೆಯಾಗಿದೆ. ಜನಸಂಖ್ಯೆಯ ಅರ್ಧಭಾಗ ಸಂಪ್ರದಾಯದ ಸಂಖ್ಯೆಯಲ್ಲಿ ಬಂಧಿಯಾಗಿದ್ದರೆ ಅಭಿವೃದ್ಧಿಯ ಹಾದಿ ಬಹುದೂರವಾಗುತ್ತದೆ ಎಂಬುದು 1980ರ ದಶಕದಲ್ಲಿ ಸ್ಪಷ್ಟ ವಾಗಿ ಕಂಡು ಬಂದ ಅನುಭವವಾಗಿದೆ. ಇದು ಕೇವಲ ಭಾರತದ ಅನುಭವವಲ್ಲ. ಎಲ್ಲ ಅಭಿವೃದ್ಧಿಶೀಲ ರಾಷ್ಟ್ರಗಳ ಅನುಭವವೂ ಇದೇ ಆಗಿದೆ. 1975ರಲ್ಲಿ ಆಚರಿಸ ಲಾದ ಅಂತರ ರಾಷ್ಟ್ರೀಯ ಮಹಿಳಾ ವರ್ಷವಾಗಲೀ, ನಂತರದ ಮಹಿಳಾದಶಕವಾಗಲೀ ಹೆಣ್ಣು ಮಕ್ಕಳನ್ನು ಹೆಚ್ಚು ಗಣನೆಗೆ ತೆಗೆದುಕೊಳ್ಳಲೇ ಇಲ್ಲ. ಪ್ರತಿಯೊಬ್ಬ ಜೀವನ ಯಾತ್ರೆಯು ಬಾಲ್ಯದಿಂದಲೇ ಆರಂಭವಾಗುತ್ತದೆ, ಎಂಬ ವಿಷಯವು ಎಲ್ಲರಿಗೂ ಮರೆತೇ ಹೋಗಿತ್ತು. ಹೆಣ್ಣು ಮಕ್ಕಳ ದುಸ್ಥಿತಿಯನ್ನು ಅಂತರರಾಷ್ಟ್ರೀಯ ವೇದಿಕೆಗಳ ಗಮನಕ್ಕೆ ತಂದ ಹಿರಿಮೆ ಭಾರತದ್ದು. 1985ರಲ್ಲಿ ನೈರೋಬಿಯವಲ್ಲಿ ನಡೆದ ಮಹಿಳಾ ದಶಕದ ಸಮಾರೋಪ ಸಮಾರಂಭದಲ್ಲಿ ಭಾರತ ಈ ವಿಷಯವನ್ನು ಪ್ರಧಾನ ವಾಗಿ ಪ್ರಸ್ತಾಪಿಸಿತು. 1986ರಲ್ಲಿ ದಕ್ಷಿಣ ಏಷ್ಯಾ ರಾಷ್ಟ್ರಗಳ ಒಕ್ಕೂಟವಾದ "ಸಾರ್ಕ್ ರಾಷ್ಟ್ರಗಳು" ಹೆಣ್ಣುಮಕ್ಕಳ ಸ್ಥಿತಿ-ಗತಿ ಅಭಿವೃದ್ಧಿಯನ್ನು ಪ್ರಧಾನ ಸವಾಲಾಗಿ ಸ್ವೀಕರಿಸಿದವು. 1990ನ್ನು ಸಾರ್ಕ್‌ರಾಷ್ಟ್ರಗಳು ಹೆಣ್ಣು ಮಗುವಿನ ವರ್ಷವನ್ನಾಗಿ

ಆಚರಿಸಿ ಹೆಣ್ಣು ಮಕ್ಕಳ ಸಮಸ್ಯೆಗಳು ಮತ್ತು ಅಭಿವೃದ್ಧಿಗೆ ಹೆಚ್ಚು ಗಮನ ಕೇಂದ್ರೀಕರಿಸಿದವು.

ಹುಟ್ಟಿನಿಂದ ದೊಡ್ಡವಳಾಗಿ ಬೆಳೆಯುವವರೆಗೂ ಹೆಣ್ಣಿಗಿರುವ ಅಡೆತಡೆಗಳ ಬಗ್ಗೆ ಹೆಚ್ಚು ಗಮನ ಹರಿಸಬೇಕಾದದ್ದು ಇಂದಿನ ತುರ್ತು ಅಗತ್ಯವಾಗಿದೆ. ಗಂಡು ಮಕ್ಕಳಿಗೆ ಹೋಲಿಸಿದರೆ ಶಾಲೆಗೆ ಹೋಗುವ ಹೆಣ್ಣು ಮಕ್ಕಳ ಸಂಖ್ಯೆ 1/3 ಭಾಗದಷ್ಟು ಮಾತ್ರ ಆದರೆ ಇದರಲ್ಲಿ ಶಾಲೆಬಿಡುವ ಹೆಣ್ಣುಮಕ್ಕಳ ಸಂಖ್ಯೆ ಗಂಡು ಮಕ್ಕಳಿಗಿಂತ ಶೇಕಡ 5 ರಷ್ಟು ಹೆಚ್ಚಿದೆ. 1980 ರಲ್ಲಿ ಶಾಲೆ ಬಿಟ್ಟ ಗಂಡು ಮಕ್ಕಳ ಸರಾಸರಿ ಪ್ರಮಾಣ ಶೇಕಡ 12.58 ಇದ್ದರೆ ಹೆಣ್ಣು ಮಕ್ಕಳ ಪ್ರಮಾಣ ಶೇಕಡ 17.30 ಆಗಿತ್ತು ಎನ್ನು ವುದನ್ನು ಗಮನಿಸಬೇಕು. ಅದರಲ್ಲೂ ಕೆಳಜಾತಿಯ ಮತ್ತು ಕೆಳವರ್ಗದ ಜನರಲ್ಲಿ ಶಾಲೆಬಿಡುವ ಬಾಲಕಿಯರ ಪ್ರಮಾಣ ಇನ್ನೂ ಹೆಚ್ಚು. ಸ್ತ್ರೀ ಪುರುಷ ಸಮಾನತೆಯ ಹಾದಿಯಲ್ಲಿ ಹೆಣ್ಣುಮಗುವಿಗೆ ಬಾಲ್ಯದಲ್ಲೇ ವಿದ್ಯಾಭ್ಯಾಸದ ಅವಕಾಶ ಕಲ್ಪಿಸುವುದು ಅಗತ್ಯವಾದ ಮಾರ್ಗವಾಗಿದೆ. ಆದ್ದರಿಂದ ಹೆಣ್ಣುಮಕ್ಕಳು ಶಾಲೆಗೆ ಹೋಗುವಂತೆ ಮಾಡುವುದಷ್ಟೇ ಅಲ್ಲದೆ ಅವರು ಬಿಡದಂತಿರಬೇಕಾದರೆ ಅದಕ್ಕೆ ಅಗತ್ಯವಾದ ಆರ್ಥಿಕ, ಸಾಮಾಜಿಕ ಪರಿಸರವನ್ನೂ ನಿರ್ಮಿಸಬೇಕು. ಹೆಣ್ಣು ಮಕ್ಕಳ ವಿದ್ಯಾಭ್ಯಾಸದ ಪ್ರಾಮು ಖ್ಯತೆಯ ಬಗ್ಗೆ ಸಮೂಹ ಮಾಧ್ಯಮಗಳ ಮೂಲಕ ಸೂಕ್ತ ಪ್ರಚಾರಕೊಡಬೇಕು.

ಹೆಣ್ಣಿನ ಹುಟ್ಟೇ ಅನಗತ್ಯವಾಗಿರುವ ಸಮಾಜದಲ್ಲಿ ಅವಳ ದೈಹಿಕ, ಮಾನಸಿಕ ಬೆಳವಣಿಗೆಯ ಕಡೆಗೂ ನಿರ್ಲಕ್ಷ್ಯ ಸಾಮಾನ್ಯವಾಗಿ ಕಂಡುಬರುತ್ತದೆ. ಅಪೌಷ್ಟಿಕತೆ ಯಿಂದ ನರಳುವ ಬಹುಪಾಲು ಹೆಣ್ಣುಮಕ್ಕಳು ಮುಂದೆ ರೋಗರುಜಿನಗಳಿಗೆ ಬೇಗನೆ ತುತ್ತಾಗುತ್ತಾರೆ. ಕುಟುಂಬದ ಸಂಖ್ಯೆಯನ್ನು ಕಡಿಮೆ ಮಾಡಿಕೊಳ್ಳುವುದರ ಬಗ್ಗೆ ತಂದೆ ತಾಯಿಗಳಿಗೆ ಶಿಕ್ಷಣಕೊಡುವುದು ಮತ್ತು ಹೆಣ್ಣು ಮಕ್ಕಳು ಗಂಡು ಮಕ್ಕಳಷ್ಟೇ ಮುಖ್ಯರು ಎಂಬುದನ್ನು ಪ್ರಚಾರ ಮಾಧ್ಯಮಗಳ ಮೂಲಕ ಪ್ರಭಾವೀಯುತವಾಗಿ ತಿಳಿಸಿ ಹೇಳುವುದು ಅಗತ್ಯವಾಗಿದೆ. ಹೆಣ್ಣನ್ನು ವರದಕ್ಷಿಣೆಯ ಆಹುತಿಯಲ್ಲಿ ಭಸ್ಮ ಮಾಡದಿರಲು ವರದಕ್ಷಿಣೆಯ ದುಷ್ಪರಿಣಾಮದ ಬಗ್ಗೆ ಜನಜಾಗೃತಿ ಉಂಟು ಮಾಡು ವುದು ಒಂದು ಮುಖ್ಯ ಕಾರ್ಯಕ್ರಮವಾದರೆ, ಈ ಪಿಡುಗನ್ನು ಸದೆಬಡಿಯಲು ಹೆಣ್ಣು ಮಕ್ಕಳೂ ವಿದ್ಯಾವಂತರಾಗಿ, ಆರ್ಥಿಕ ಸ್ವಾವಲಂಬನೆ ಪಡೆಯುವುದು ಅವಶ್ಯಕ ಎಂಬ ವಿಷಯವನ್ನು ಹೆಚ್ಚು ಹೆಚ್ಚು ಒತ್ತಿಹೇಳಬೇಕಾಗಿದೆ.

ಹೆಣ್ಣುಮಗುವನ್ನು ಸಮಾಜದಲ್ಲಿ ಬೆಳೆಸುವ ರೀತಿಯೇ ಬದಲಾಗಬೇಕಾದ ಅವಶ್ಯಕತೆಯಿದೆ. ಅವಳಿಗೆ ಕೊಡುವ ವಿದ್ಯಾಭ್ಯಾಸ ಮತ್ತು ಅವಳ ದುಡಿಮೆ—ಈ

ಎರಡೂ ಅವಳನ್ನೂ ಮದುವೆ ಮಾರುಕಟ್ಟೆಗೆ ತಯಾರುಮಾಡುವ ಗುಣವಿಶೇಷಣಗಳಾಗಬಾರದು. ಹೆಣ್ಣಿನ ಪರಿಪೂರ್ಣ ,ವ್ಯಕ್ತಿತ್ವದ ವಿಕಾಸಕ್ಕೆ ವಿದ್ಯಾಭ್ಯಾಸದ ಅಗತ್ಯ ಮತ್ತು ಅವಳ ಆರ್ಥಿಕ ಸ್ವಾವಲಂಬನೆ ಅವಳು ದಿಟ್ಟವಾಗಿ ಸಮಾಜದಲ್ಲಿ ಬದುಕಲು ಅವಶ್ಯಕವಾದ ಅಂಶ ಎಂಬುದನ್ನು ಹೆಚ್ಚು ಸ್ಪಷ್ಟಪಡಿಸಿ ಹೆಣ್ಣು ಮಕ್ಕಳ ಮತ್ತು ಅವರ ತಂದೆ ತಾಯಿಯರ ತಲೆಯಲ್ಲಿ ತುಂಬಬೇಕು. ವಿವಾಹ ಹೆಣ್ಣಿಗೆ ವೃತ್ತಿ ಎಂಬ ಭಾವನೆ ಮೊದಲು ಸಮಾಜದ ಮನಸ್ಸಿನಿಂದಲೇ ತೊಲಗಬೇಕು.



"ಕೈಗೆ ಕೈ ಜೋಡಿಸಿ. ಸಂಘಟಿತರಾಗಿ"

ಎಲ್ಲಿಯವರೆಗೆ ನಮ್ಮ ಸಮಾಜವಲ್ಲಿ ಹೆಣ್ಣುಮಕ್ಕಳ ಜನನ ಸ್ವಾಭಾವಿಕ ಸಂಗತಿಯಾಗುವುದಿಲ್ಲವೋ ಮತ್ತು ಅವಳಿಗೆ ತನ್ನ ಬದುಕನ್ನು ನಿರ್ಧರಿಸಿಕೊಳ್ಳಲು ಆಯ್ಕೆಯ ಸ್ವಾತಂತ್ರ್ಯ ಮತ್ತು ಅವಕಾಶವನ್ನು ಕೊಡುವುದಿಲ್ಲವೋ ಅಲ್ಲಿಯವರೆಗೆ ದೇಶದ ಪ್ರಗತಿ ಕುಂಠಿತವಾಗಿಯೇ ಇರುತ್ತದೆ. ಈ ಎಲ್ಲ ಅಂಶಗಳ ಹಿನ್ನೆಲೆಯಲ್ಲಿ ಮಹಿಳಾ ಚಳುವಳಿ ಮತ್ತು ಮಹಿಳಾ ಕಲ್ಯಾಣ ಕಾರ್ಯಕ್ರಮಗಳು ಹೆಣ್ಣು ಮಗುವಿನ ಅಭ್ಯುದಯವನ್ನು ಮುಖ್ಯ ಕಾರ್ಯಕ್ರಮವಾಗಿ ಮಾಡಿಕೊಳ್ಳಬೇಕಾದದ್ದು ಇಂದಿನ ತುರ್ತು ಅಗತ್ಯವಾಗಿದೆ.



## "ಮಹಿಳಾ ಸಾಕ್ಷರತೆ"

ಶ್ರೀಮತಿ ಎಸ್ ಸತ್ಯಾ

'ನಮ್ಮ ಎದೆಯಲ್ಲಿರುವ ಅಕ್ಷರಗಳನ್ನು ಸುಡಲಿ ನೋಡೋಣ...' ಎಂದು 59 ವರ್ಷದ ಮುಸ್ಲಿಂ ಮಹಿಳೆ ಅಯೇಷಾ ಚೆಲ್ಲಕ್ಕಾಡನ್ ಗುಡುಗಿದಾಗ ಕೇರಳದಲ್ಲಿ ಅಕ್ಷರಗಳು ಮಾತನಾಡಲಾರಂಭಿಸಿದವು.

"ಪುಸ್ತಕಗಳು ಮಾತಾಡುತ್ತಿವೆ, ಮಾತಾಡುತ್ತಿವ" ಎಂಬ ಖ್ಯಾತ ಕವಿ. ನಾಟಕಕಾರ ಬ್ರೆಕ್ಟನ ಕವನದ ಸಾಲುಗಳು ಅಕ್ಷರಗಳು ರೆಕ್ಕೆ ಬಿಚ್ಚಿದ ಹಕ್ಕಿಗಳಂತೆ ಹಾರುವುದರ ಬಗ್ಗೆ ನೀಡಿದ ಚಿತ್ರಣಕ್ಕೆ ಇಂದು ದೇಶದ ಎಲ್ಲೆಡೆ ಎಷ್ಟೊಂದು ರುಜು ವಾತುಗಳು !

ಗಂಡನನ್ನು ಕಳೆದುಕೊಂಡು ಮಕ್ಕಳೊಂದಿಗೆ ಸಂಸಾರ ನಡೆಸಿ ಬಡತನದ ಬೇಗೆಯಲ್ಲಿಯೂ ಅಕ್ಷರ ಕಲಿತ ಅಯೇಷಾ ಕೇರಳವನ್ನು ಪ್ರಥಮ ಸಾಕ್ಷರ ರಾಜ್ಯ ಎಂದು ಬೆಳಕಿನ ಜ್ಯೋತಿ ಹಿಡಿದು ನೀಡಿದಾಗ, ಆಕೆಯ ಕಣ್ಣಾಲಿಗಲು ತುಂಬಿ ಬಂದವು. ಅಕ್ಷರ ಜ್ಯೋತಿಯಿಂದ ಬಾಳಿನ ಅಂಧಕಾರವನ್ನು ತೊಡೆದು ಹಾಕುವ ವಿಶ್ವಾಸ ಇತ್ತು. ಅಕ್ಷರ ಮಾತನಾಡುವುದು ಹೇಗೆ ಎಂಬುದನ್ನು ಆಕೆ ಸ್ಪಷ್ಟವಾಗಿ ಮನಗಂಡಿದ್ದಳು.

"ನನಗೆ ಹೇಳುವುದು ತುಂಬಾ ಇದೆ" ಎನ್ನುತ್ತಾಳೆ ಮಲ್ಲಪುರಂ ಮೈಲಾಡಿಯ 50 ವರ್ಷದ ಬಿಷಾತುಮ್ಮಾ.

ಬಿಷಾತುಮ್ಮಾ ಕೇರಳದ ಹೆಸರಾಂತ ಸಾಹಿತಿಯೇನಲ್ಲ. ಆದರೂ ಈಕೆಯ ಕೃತಿಗಾಗಿ ಜನ ಯಾವುದೇ ಜನಪ್ರಿಯ ಮಲೆಯಾಳಂ ಕಾದಂಬರಿಕಾರ, ಕವಿಯ ಪುಸ್ತಕಗಳಿಗೆ ಕಾಯುವಂತೆ ಕಾಯುತ್ತಾರೆ. ಏಕೆಂದರೆ ಬಿಷಾತುಮ್ಮನ ಲೇಖನಿಗೆ ಈಗ ಮಾತನಾಡುವುದು ಗೊತ್ತಿದೆ. ಅವಳ ಎದೆಯೊಳಗೆ ಮಾತ್ರವೇ ಉಳಿದು ಬಿಟ್ಟಿದ್ದ ಸಂಪತ್ತುಗಳು ಈಗ ಅಕ್ಷರವಾಗಿ ಬದಲಾಗಿವೆ.

ಇದೀಗತಾನೆ ಅಕ್ಷರದ ಅಂಗಳದಿಂದ ಹೊರಬಂದಿರುವ ಬಿಷಾತುಮ್ಮಾ ಇಂದು ಇಲ್ಲಿನ ಕತೆಗಾರ್ತಿ, ಕವಿಯತ್ರಿ, ಈಕೆಯ ಬಳಿ ಸದಾ ಇರುವ 120 ಪುಟಗಳ ಪುಸ್ತಕ ತಿರುವಿ ಹಾಕಿದರೆ ಅದರಲ್ಲಿ ಕತೆ, ಕವಿತೆಗಳೇ. ಮೊದಲು ಆಕೆ ಕಥೆ ಕಟ್ಟುತ್ತಿದ್ದಳು. ಕವಿತೆ ಹೆಣೆಯುತ್ತಿದ್ದಳು. ಆದರೆ ಅದು ಆಕೆಯ ಎದೆಯೊಳಗೆ ಮಾತ್ರ. ಇವಳ ಎದೆಯಾಳದ ತಲ್ಲಣಗಳು, ನಿಟ್ಟುಸಿರು ಹೊರಗೆ ಬರಲೇ ಇಲ್ಲ. ಶಬ್ದ ಶಬ್ದ ಕೂಡಿ ಕಾವ್ಯವಾಗಲಿಲ್ಲ ಸಾಕ್ಷರ ಕೇರಳದ ಒಡಲಿನಿಂದ ಈಗ ನವಸಾಕ್ಷರವಾಗಿ ಹೊರಬಂದಿರುವ ಬಿಷಾತುಮ್ಮಾಗೆ ಈಗ ಆ ನೋವಿಲ್ಲ. ತನ್ನ ನೋವುಗಳಿಗೆ ಅಕ್ಷರ ನೀಡಿದ್ದಾಳೆ.

ಕೇರಳದ ಜನಪ್ರಿಯ ಮಾಪ್ಪಿಳ್ಳಪಾಟ್ ಶೈಲಿಯಲ್ಲಿರುವ ಈಕೆಯ ಕವಿತೆಗಳು ಜನಪ್ರಿಯವಾಗಿವೆ. ಬೀಪಾತುಮ್ಮಾಳನ್ನು ನೀನೇಕೆ ಬರೆಯುತ್ತೀಯಾ ? ಎಂದು ಕೇಳಿದರೆ, ನಾನು ತುಳಿದ ಕೆಂಡದ ಹಾದಿಯ ಅನುಭವ ನನಗೇ ಗೊತ್ತಿತ್ತು. ನಾನು ತುಳಿದ ಹಾದಿಯನ್ನು ನಾನಲ್ಲದೇ ಇನ್ನಾರು ವರ್ಣಿಸಲು ಸಾಧ್ಯ ಎನ್ನುತ್ತಾಳೆ. ಆ ಕಾರಣಕ್ಕಾಗಿಯೇ ಬಳಿ ಬರೆಯುವುದು ತುಂಬಾ ಇದೆ.

ಅತೆ.... ಕೋಮಲತೆ ಬೇಕಿದಕೆ ಹಾರೈಕೆ

ಇನ್ನು ಆಂಧ್ರಪ್ರದೇಶದ ನೆಲ್ಲೂರು ಘಟನೆ. 'ಸೀತಮ್ಮ' ಎಂಬ ಕತೆಯು ಮಹಿಳೆ ತಾನೇ ಮುಂದಾಗಿ ಮದ್ಯಪಾನದ ವಿರುದ್ಧ ಸಮರ ಸಾರಿದ್ದರಿಂದ ಇದೇ ಆಂಧ್ರ ಪ್ರದೇಶದಲ್ಲಿ ಮಧ್ಯಪಾನದ ವಿರುದ್ಧ ಮಹಿಳೆಯರು ಸಮರ ಸಾರಿದ್ದಾರೆ.

ಮಹಿಳೆ ಸಾಕ್ಷರತೆಯತ್ತ ಹೆಜ್ಜೆ ಹಾಕುವುದರಿಂದ ಉಂಟಾಗುವ ಬದಲಾವಣೆಗೆ ಇವು ಕೆಲ ದಿಕ್ಸೂಚಿಗಳು.

ಭಾರತವಲ್ಲಿ ಮಹಿಳಾ ಸಾಕ್ಷರತೆಯ ಪ್ರಮಾಣ, ಆತಂಕ ಹುಟ್ಟಿಸುವ ಚಿತ್ರಣ ನೀಡುತ್ತದೆ. ಇಡೀ ರಾಷ್ಟ್ರದಲ್ಲಿ ಸಾಕ್ಷರ ಮಹಿಳೆಯರ ಸಂಖ್ಯೆ ಶೇ. 39% ಮಾತ್ರ, ಕೇರಳ ಮತ್ತು ಮಿಜೊರಾಂ ಹೊರತುಪಡಿಸಿದಂತೆ ಇನ್ನುಳಿದ ರಾಜ್ಯಗಳಲ್ಲಿ ಮಹಿಳೆ ಅಕ್ಷರ ಲೋಕದಿಂದ ದೂರವೇ ಉಳಿದಿದ್ದಾಳೆ. 1991ರ ಜನಗಣತಿ ಪ್ರಕಾರವೇ ಕರ್ನಾಟಕ ಶೇ. 44.3 ಮಹಿಳಾ ಸಾಕ್ಷರತೆಯೊಂದಿಗೆ ಹಿಂದಿನ ಸಾಲಿನಲ್ಲಿಯೇ ಕುಳಿತಿವೆ. ಬಿಹಾರ ರಾಜಸ್ಥಾನವಲ್ಲಿ ಮಹಿಳಾ ಸಾಕ್ಷರತೆ ಅತ್ಯಂತ ಹಿಂದುಳಿದಿದ್ದು ಶೇ. 25ನ್ನೂ ದಾಟಲಾಗಿಲ್ಲ. ಕೇರಳ ಶೇ. 86% ಮಹಿಳಾ ಸಾಕ್ಷರತೆಯೊಂದಿಗೆ ಮೊದಲ ಸ್ಥಾನದಲ್ಲಿದೆ.

ತನ್ನ ಒಟ್ಟು ಜನಸಂಖ್ಯೆಯಲ್ಲಿ ಅರ್ಧದಷ್ಟಿರುವ ಮಹಿಳೆಯರ ಸ್ವಾತಂತ್ರ್ಯ ಮತ್ತು ಸಮಾನತೆಯನ್ನು ಕಸಿದುಕೊಂಡಿರುವ ಯಾವುದೇ ಸಮಾಜದಲ್ಲಾಗಲಿ ಅಥವ ದೇಶದಲ್ಲಾಗಲಿ ಉತ್ತಮ ಜೀವನಮಟ್ಟವನ್ನು ನಿರೀಕ್ಷಿಸುವುದು ಸಾಧ್ಯವಿಲ್ಲ. ಈ ಹೇಳಿಕೆಯ ಹಿನ್ನೆಲೆಯಲ್ಲಿ ಭಾರತೀಯ ಸ್ತ್ರೀಯರ ಸ್ಥಿತಿ–ಗತಿಯತ್ತ ಒಂದು ಕಿರು ನೋಟ ಹರಿಸುವುದು ಇಂದು ಮುಖ್ಯವಾಗುತ್ತದೆ. ಸ್ವಾತಂತ್ರ್ಯ ಬಂದು ನಾಲ್ಕು ದಶಕಗಳಾದರೂ, ಇನ್ನೂ ಬಡತನ ನಿರುದ್ಯೋಗಗಳ ನಡುವೆ ನರಳುತ್ತಿರುವ ಭಾರತದ ಸಾಮಾಜಿಕ ವ್ಯವಸ್ಥೆಯು ಜಾತಿ–ಭಾಷೆ–ಧರ್ಮ ಮತು ಪ್ರಾಂತೀಯ ವಾದಗಳಿಂದ ಜರ್ಝರಿತವಾಗುತ್ತಿರುವ ಇಂದಿನ ದಿನದಲ್ಲಿ ಮಹಿಳೆಯರ ಸ್ಥಿತಿ–ಗತಿ ಕುರಿತು ಚಿಂತನೆ ಇನ್ನೂ ಹೆಚ್ಚಿನ ಪ್ರಾಮುಖ್ಯತೆ ಗಳಿಸುತ್ತದೆ.

ಸಾಮಾಜಿಕ ಬದಲಾವಣೆಯ ಹರಿಕಾರರಾಗಬೇಕಿದ್ದ ಮಹಿಳೆಯರು ಇಂದು ಹಿಂದುಳಿದಿರುವಿಕೆ ಸಂಕೇತವಾಗಿರುವುದು ದುರದೃಷ್ಟಕರ. ಈ ಕೆಳಗಿನ ಕೆಲವು ಅಂಕಿ–ಸಂಖ್ಯೆಗಳು ಹಾಗೂ ವಾಸ್ತವ ಅಂಶಗಳು ಮಹಿಳೆಯರ ಸ್ಥಿತಿಯ ಬಗ್ಗೆ ಕ್ಷ–ಕಿರಣ ಬೀರಬಲ್ಲವು.

* 1991ರ ಜನಸಂಖ್ಯೆ ಸಮೀಕ್ಷೆಯ ಪ್ರಕಾರ ಅನಕ್ಷರಸ್ಥ ಪುರುಷರ ಸಂಖ್ಯೆ ಶೇಕಡಾ 36.1 ರಷ್ಟಿದ್ದರೆ, ಅನಕ್ಷರಸ್ಥ ಮಹಿಳೆಯರ ಸಂಖ್ಯೆ ಶೇಕಡಾ

60.6 ರಷ್ಟಿದೆ. ಕರ್ನಾಟಕದಲ್ಲಿ ಈ ಪ್ರಮಾಣ ಅನುಕ್ರಮವಾಗಿ 32.75 ಮತ್ತು 56.8 ರಷ್ಟಿದೆ.

* ಬಹುತೇಕ ರಾಷ್ಟ್ರಗಳಲ್ಲಿ ಸ್ತ್ರೀ ಮತ್ತು ಪುರುಷರ ಜನಸಂಖ್ಯಾ ಪ್ರಮಾಣ ಒಂದಕ್ಕೊಂದು ಪೂರಕವಾಗಿದ್ದರೆ ಭಾರತದಲ್ಲಿ ಈ ಸ್ತ್ರೀಯರ ಸಂಖ್ಯೆ ಪುರುಷರಿಗಿಂತ ಅತೀವವಾಗಿ ಕಡಿಮೆ ಇದೆ, 1901ರಲ್ಲಿ ಪ್ರತಿ ಒಂದು ಸಾವಿರ ಪುರುಷರಿಗೆ 972 ಸ್ತ್ರೀಯರಿದ್ದರು. 1991ರಲ್ಲಿ ಸ್ತ್ರೀಯರು ಈ ಸಂಖ್ಯೆ 929ಕ್ಕೆ ಇಳಿದಿದೆ.

* ಪ್ರತಿವರ್ಷ ಶಾವನ್ನಪ್ಪುವ 3,00,000 ಬಾಲಕಿಯರಲ್ಲಿ, ಪ್ರತಿ 6ರಲ್ಲಿ ಒಂದು ಸಾವು ಬಾಲಕ-ಬಾಲಕಿಯರ ನಡುವೆ ತೋರುವ ತಾರತಮ್ಯದಿಂದಾಗಿ ಸಂಭವಿಸುತ್ತದೆ.

* 24 ವರ್ಷದೊಳಗಿನ ಯುವತಿಯರ ಸಾವಿನಲ್ಲಿ ಪ್ರತಿಶತ 13 ರಷ್ಟು ಯುವತಿಯರು ಗರ್ಭಿಣಿಯರಾಗಿದ್ದಾಗ ಅಥವಾ ಪ್ರಸವ ಕಾಲದಲ್ಲಿ ಮರಣ ಹೊಂದುತ್ತಾರೆ.

* ಆಧುನಿಕ ವೈದ್ಯಕೀಯ ವಿಜ್ಞಾನದ ಆವಿಷ್ಕಾರಗಳೂ ಹೆಣ್ಣುಮಕ್ಕಳಿಗೆ ಕುತ್ತಾಗಿ ಪರಿಣಮಿಸಿದೆ. 1984ರಲ್ಲಿ ಮುಂಬೈ ನಗರವೊಂದರಲ್ಲೇ 40 ಸಾವಿರ ಹೆಣ್ಣು ಶಿಶು ಭ್ರೂಣಗಳನ್ನು ಹತ್ಯೆ ಮಾಡಲಾಗಿದೆ,

* ಪ್ರತಿ ಮೂರು ಬಾಲಕರಲ್ಲಿ ಇಬ್ಬರು ಬಾಲಕರು ಪ್ರಾಥಮಿಕ ಶಾಲೆ ಸೇರಿದರೆ, ಪ್ರತಿ ಮೂವರು ಬಾಲಕಿಯರಲ್ಲಿ ಕೇವಲ ಒಬ್ಬಳು ಶಾಲೆ ಸೇರುತ್ತಾಳೆ. ಎರಡನೇ ತರಗತಿಗೆ ಬರುವ ವೇಳೆಗೆ ಶಾಲೆಗೆ ಸೇರಿದ ಬಾಲಕಿಯರಲ್ಲೂ ಮೂರನೇ ಒಂದು ಭಾಗದಷ್ಟು ಹುಡುಗಿಯರು ಅನೇಕ ಕಾರಣಗಳಿಂದ ಶಾಲೆ ಬಿಡುತ್ತಾರೆ.

ಭಾರತೀಯ ಮಹಿಳೆಯ ಕಷ್ಟ-ಕಾರ್ಪಣ್ಯಗಳನ್ನು ಅಂಕಿ-ಸಂಖ್ಯೆಯಲ್ಲಿ ಅಳೆಯುವುದಕ್ಕೆ ಸಾಕಷ್ಟು ಮೊದಲೇ, ಅಂದರೆ ಜನ್ಮದಿಂದಲೇ, ಆಕೆ ತನ್ನ ಸ್ತ್ರೀತ್ವದ ಬಂಧಿಯಾಗುತ್ತಾಳೆ. "ಹೆಣ್ಣು ಮಗುವಾದರೆ ಬೇರೆಲ್ಲಾದರೂ ಜನಿಸಲಿ. ಗಂಡು ಮಗುವಾದರೆ ಈ ನಾಡಿನಲ್ಲೇ ಜನಿಸಲಿ" ಎಂಬ ಅಥರ್ವಣ ವೇದ ಹುಟ್ಟಿದ ಭಾರತದ ಸಾಮಾಜಿಕ ಮತ್ತು ಸಾಂಸ್ಕೃತಿಕ ಪರಿಸರಗಳು ಹೆಣ್ಣು ಶಿಶುವಿನ ಜನನವನ್ನು ಸಂಭ್ರಮದಿಂದ ಸ್ವಾಗತಿಸಿದ ಇತಿಹಾಸ ಇಲ್ಲವೇ ಇಲ್ಲ. ಗಂಡು ಮಗು ಹುಟ್ಟಿದಾಗ ತೋರುವ ಸಂಭ್ರಮ ಹಾಗೂ ಹೆಣ್ಣು ಮಗು ಹುಟ್ಟಿದಾಗ ತೋರುವ ಅನಾದರಗಳು ಮಹಿಳೆಗೆ ತನ್ನ ಸ್ತ್ರೀತ್ವದ ಬಗೆಗೆ ಹೆಮ್ಮೆಯನ್ನಾಗಲೀ-ಗೌರವವನ್ನಾಗಲಿ ಮೂಡಿಸುವುದೇ ಇಲ್ಲ.

ಹುಟ್ಟಿನಿಂದಲೇ ಹೊರೆ ಎನಿಸಿಕೊಳ್ಳುವ ಹೆಣ್ಣು ಮಕ್ಕಳಿಗೆ ಕಣ್ಣಿಗೆ ಕಾಣುವಷ್ಟು ಸ್ಪಷ್ಟವಾಗಿಯೇ ಅನಾದರ ತೋರಲಾಗುತ್ತದೆ. "ಹೆಣ್ಣುಮಕ್ಕಳನ್ನು ಬೆಳೆಸುವುದು ನೆರೆಮನೆಯ ಅಂಗಳದಲ್ಲಿರುವ ಗಿಡಕ್ಕೆ ನೀರುಣಿಸಿದಂತೆ" ಎಂಬ ಗಾದೆ ಮಾತುಗಳನ್ನು ಪ್ರೋತ್ಸಾಹಿಸಿರುವ ಈ ನಾಡಿನಲ್ಲಿ ಅಂಬೆಗಾಲಿಕ್ಕುವ ಹೆಣ್ಣುಮಗುವೂ ಅಸಮಾನತೆಯಿಂದ ನರಳುವುದು ಘೋರ ವಾಸ್ತವ. ವೈಜ್ಞಾನಿಕವಾಗಿ ಹೆಣ್ಣು ಮಕ್ಕಳು ಹಾಗೂ ಮಹಿಳೆಯರಲ್ಲಿ ಪುರುಷರಿಗಿಂತಲೂ ಹೆಚ್ಚಿನ ರೋಗ ನಿರೋಧಕ ಶಕ್ತಿ, ದೀರ್ಘ ಆಯುಸ್ಸಿನ ಶಕ್ತಿಗಳಿದ್ದರೂ ಸಮಾಜದ ಅವಕೃಪೆಗೆ ತುತ್ತಾಗಿ ಪೌಷ್ಠಿಕಾಂಶದ ಕೊರತೆ ಹಾಗೂ ವೈದ್ಯಕೀಯ ಸೌಲಭ್ಯಗಳ ಕೊರತೆಗಳಿಂದ ನರಳುವ ಹೆಣ್ಣು ಮಕ್ಕಳು ರೋಗ ಪೀಡಿತರಾಗುತ್ತಿದ್ದಾರೆ ಹಾಗೂ ಸರಿಯಾದ ಆರೈಕೆ ಇಲ್ಲದೆ ಬೇಗ ಸಾವನ್ನಪ್ಪುತ್ತಿದ್ದಾರೆ. ಈ ವಸ್ತುಸ್ಥಿತಿಯನ್ನು ಅನೇಕ ವೈಜ್ಞಾನಿಕ ಸಂಶೋಧನೆಗಳು ಸ್ಪಷ್ಟಪಡಿಸಿವೆ.

'ನೀನೊಬ್ಬ ಕನಿಷ್ಠ ದರ್ಜೆಯ ವ್ಯಕ್ತಿ' ಎಂಬ ಸಮಾಜ ತೊಡಿಸುವ ಹಣೆಪಟ್ಟಿಯನ್ನು ತೊಟ್ಟುಕೊಳ್ಳಲು ಮಾನಸಿಕವಾಗಿ ಕಷ್ಟಪಟ್ಟು ಸಿದ್ಧಗೊಳ್ಳುವ ಹೆಣ್ಣು ಮಕ್ಕಳನ್ನು ಅವರ ಮೌಲ್ಯದ ಅರಿವಾಗದಂತೆ ಮಾಡಲಾಗುತ್ತದೆ. ಶಾಲೆ ಸೇರುವ ಬೆರಳೆಣಿಕೆಯಷ್ಟು ಹೆಣ್ಣು ಮಕ್ಕಳು ಕೂಡ ಮನೆಯಲ್ಲಿ ತಮ್ಮ-ತಂಗಿಯನ್ನು ನೋಡಿಕೊಳ್ಳಬೇಕೆಂಬ ನೆಪದಿಂದಲೋ ಅಥವಾ ಬಡತನದ ಸಂಸಾರಕ್ಕೆ ನಾಲ್ಕು ಕಾಸು ಸೇರಿಸಬೇಕೆಂಬ ಕಡು ವಾಸ್ತವದ ನೆಪದಿಂದಲೋ ಶಾಲೆ ಬಿಡಬೇಕಾಗುತ್ತಿದೆ.

ಇತ್ತೀಚಿನ ಒಂದು ಸಮೀಕ್ಷೆಯ ಪ್ರಕಾರ ಗ್ರಾಮೀಣ ಪ್ರದೇಶದಲ್ಲಿ ಪ್ರತಿಶತ 30ರಷ್ಟು ಮನೆಗೆಲಸವನ್ನು ಮಾಡುವುದು ಪುಟ್ಟ ಪುಟ್ಟ ಹೆಣ್ಣು ಮಕ್ಕಳು. ಕೃಷಿ ಆಧಾರಿತ ಕುಟುಂಬಗಳ ಹೆಣ್ಣು ಮಕ್ಕಳ ಸ್ಥಿತಿ-ಗತಿ ಕುರಿತಂತೆ ಮಾಡಿರುವ ಮತ್ತೊಂದು ವಿವರವಾದ ಸಮೀಕ್ಷೆಯು ಗ್ರಾಮೀಣ ಪ್ರದೇಶದ ಹೆಣ್ಣು ಮಕ್ಕಳು ದಿನವೊಂದಕ್ಕೆ ಕನಿಷ್ಠ 9 ಗಂಟೆಗಳ ಕಾಲ ದುಡಿಮೆ ಮಾಡುತ್ತಾರೆ ಎನ್ನುತ್ತದೆ. ರಾಷ್ಟ್ರಮಟ್ಟದ ಕನಿಷ್ಠ ಕೂಲಿ ಪ್ರಮಾಣಕ್ಕೆ ಹೋಲಿಸಿದರೆ ಈ ಮಕ್ಕಳು ಪ್ರತಿವರ್ಷ 2,200 ರೂಪಾಯಿಗಳಷ್ಟು ದುಡಿಮೆ ಮಾಡುತ್ತಾರೆ. ಒಂದು ಹೆಣ್ಣು ಮಗು ವಯಸ್ಕಳಾಗುವ ವೇಳೆಗೆ ಕನಿಷ್ಠ 39,600 ರೂಪಾಯಿ ಮೌಲ್ಯದ ದುಡಿಮೆ ಸಲ್ಲಿಸಿರುತ್ತಾಳೆ. ಇದು ಹುಟ್ಟಿದ ಮನೆಯಲ್ಲಿ, ನಂತರ ಮದುವೆಯಾದ ಮೇಲೆ ಗಂಡನ ಮನೆಯಲ್ಲೂ ಆಕೆಯ ಸ್ಥಿತಿಯಲ್ಲಿ ಏನೂ ಬದಲಾವಣೆ ಇರುವುದಿಲ್ಲ.

ಆಧುನಿಕ ತಂತ್ರಜ್ಞಾನದ ಕೊಡುಗೆಗಳ ಫಲವೂ ಸ್ತ್ರೀ ಪುರುಷರಿಗೆ ಸಮಾನವಾಗಿ ದೊರೆತಿಲ್ಲದಿರುವುದು ಗಮನಾರ್ಹ. ಭ್ರೂಣದ ಹಂತದಲ್ಲಿಯೇ ಶಿಶುವಿನ ಅಂಗ ವೈಕಲ್ಯವನ್ನು ಗುರುತಿಸಲೆಂದು ರೂಪಿಸಲಾದ 'ಅಮಿನೊಸೆಂಟೆಸಿಸ್' ತಂತ್ರವೂ ಆಧುನಿಕ

ಅವಿಷ್ಕಾರಗಳು ಹೆಣ್ಣು ಭ್ರೂಣವನ್ನು ಗರ್ಭಪಾತ ಮಾಡಿಸಲು ಬಳಕೆಯಾಗುತ್ತಿವೆ. ಉರುವಲು ಹಾಗೂ ಕುಡಿಯುವ ನೀರಿಗಾಗಿ ಮೈಲಿಗಟ್ಟಲೆ ನಡೆಯಬೇಕಾದ ಮಹಿಳೆಯರಿಗೆ ಪರಿಸರ ನಾಶ ಮತ್ತೊಂದು ತೊಡಕಾಗಿದೆ. ಅಧ್ಯಯನವೊಂದರ ಪ್ರಕಾರ, ಕರ್ನಾಟಕದ ಗ್ರಾಮೀಣ ಮಹಿಳೆಯೊಬ್ಬಳಿಗೆ ದಿನನಿತ್ಯದ ಬಳಕೆಗೆ ನೀರು ತರಲು ಕನಿಷ್ಟ 1.9 ಗಂಟೆ ವ್ಯಯವಾಗುತ್ತಿದೆ. ಉತ್ತರ ಪ್ರದೇಶದಲ್ಲಿ ಇದೇ ಕೆಲಸಕ್ಕೆ 3.0 ಗಂಟೆ ಕಾಲ ತಗಲುತ್ತದೆ.

ರಾಷ್ಟ್ರದ ಅರ್ಧದಷ್ಟು ಜನರನ್ನು ಸಂಕೋಲೆಯಲ್ಲಿ ಬಂಧಿಸಿರುವ ರಾಷ್ಟ್ರ ಅದಕ್ಕಾಗಿ ತಾನೇ ದಂಡ ತೆರಬೇಕಾಗುತ್ತದೆ. ಅಭಿವೃದ್ಧಿ ಕಾರ್ಯಕ್ರಮಗಳ ಅಡಿಯಲ್ಲಿ ಮೌನಿಗಳ ವರ್ಗಕ್ಕೆ ನ್ಯಾಯವಾಗಿ ಸಲ್ಲಬೇಕಾದುದನ್ನು ಕೊಡದಿರುವ ರಾಷ್ಟ್ರ ಬಡತನ ನಿವಾರಣೆ, ಸಾಮಾಜಿಕ ನ್ಯಾಯ, ಕ್ರಿ.ಶ. 2000 ವೇಳೆಗೆ ಎಲ್ಲರಿಗೂ ಆರೋಗ್ಯ, ಕಡ್ಡಾಯ ಪ್ರಾಥಮಿಕ ಶಿಕ್ಷಣದ ಯೋಜನೆಗಳನ್ನು ಸಂಪೂರ್ಣವಾಗಿ ಯಶಸ್ವಿಗೊಳಿಸಲು ಹೇಗೆ ಸಾಧ್ಯ ಎಂಬುದನ್ನು ಚಿಂತಿಸಬೇಕಾಗಿದೆ. ಕುಟುಂಬ ನಿಯಂತ್ರಣ ಯೋಜನೆ, ಶಿಶುಮರಣದ ಪ್ರಮಾಣ ಕಡಿತ ಹಾಗೂ ಮಹಿಳೆಯರ ಆಯುಷ್ಯ ಹೆಚ್ಚಿಸಬೇಕೆಂಬ ಸರ್ಕಾರದ ಬೃಹತ್ ಯೋಜನೆಗಳು ವಿಫಲವಾಗಿರುವುದರಿಂದಲೇ ಮಹಿಳೆಯರ ದಾರುಣ ಸ್ಥಿತಿಯ ಗುಟ್ಟೊ ಅಡಗಿದೆ.

ರಾಷ್ಟ್ರದ ಒಟ್ಟಾರೆ ಅಭಿವೃದ್ಧಿಗೆ ಮಹಿಳೆಯ ಅಭಿವೃದ್ಧಿಯೇ ಕೇಂದ್ರಸ್ಥಾನ ಎಂಬುದನ್ನು ಗುರುತಿಸಿದ ಜವಾಹರಲಾಲ್ ನೆಹರೂ ಅವರೂ, "ಜನತೆಯನ್ನು ಎಚ್ಚರಗೊಳಿಸಬೇಕೆಂದರೆ ಮೊದಲು ಮಹಿಳೆಯರನ್ನು ಎಚ್ಚರಗೊಳಿಸಬೇಕು. ಮಹಿಳೆಯರು ಒಮ್ಮೆ ಎಚ್ಚೆತ್ತುಕೊಂಡರೆ ಆಕೆಯ ಕುಟುಂಬ ಎಚ್ಚೆತ್ತುಕೊಳ್ಳುತ್ತದೆ, ನಂತರ ಹಳ್ಳಿ ಅಭಿವೃದ್ಧಿಯ ಪಥದೆಡೆಗೆ ಸಾಗುತ್ತದೆ; ಅದರ ಹಿಂದೆ ಇಡೀ ರಾಷ್ಟ್ರ ಎಚ್ಚೆತ್ತುಕೊಳ್ಳುತ್ತದೆ" ಎಂದಿದ್ದರು.

ಸಮಾಜದ ಇತರೆ ಶೋಷಿತ ವರ್ಗಗಳ ಹೋರಾಟದ ಜೊತೆಗೆ ಮಹಿಳಾ ಸ್ವಾತಂತ್ರ್ಯದ ಹೋರಾಟವನ್ನು ಬೆಸೆಯುವುದು ಸ್ತ್ರೀ ಶಕ್ತಿಯನ್ನು ಸರಿದಾರಿಯಲ್ಲಿ ಮುನ್ನಡೆಸುವ ಒಂದು ಮಾರ್ಗವಾಗಿದೆ. ಆದರೆ ಇಂದಿನ ಪುರುಷ ಪ್ರಧಾನ ಆಳುವ ವರ್ಗವು ಮಹಿಳೆಯರ ಹೋರಾಟವನ್ನು ಇತರೆ ಯಾವುದೇ ಸಾಮಾಜಿಕ ಹೋರಾಟದೊಂದಿಗೆ ಮೇಳೈಸದಂತೆ ತಡೆಯಲು ಎಲ್ಲ ಪ್ರಯತ್ನ ನಡೆಸಿದೆ.

ಮಹಿಳೆಯರ ಸ್ಥಿತಿ–ಗತಿ ಸುಧಾರಿಸಿದರೆ ಸಾಮಾಜಿಕ ಜೀವನದ ಸ್ಥಿತಿ ಹೇಗೆ ಸುಧಾರಿಸಿತು ? ಎಂಬುದು ಪ್ರಶ್ನೆ. ಇದಕ್ಕೆ ಉತ್ತರವಾಗಿ ಕೇರಳದ ಸ್ಥಿತಿ ಗಮನಿಸಬಹುದು. ಭಾರತದಲ್ಲೇ ಅತ್ಯಧಿಕ ಸಂಖ್ಯೆಯ ಅಕ್ಷರಸ್ಥ ಮಹಿಳೆಯರನ್ನು ಹೊಂದಿ

ರುವ ಹಿರಿಮೆ ಕೇರಳದ್ದು. ಹಾಗೆಯೇ ಇಡೀ ಭಾರತದಲ್ಲಿ ಪುರುಷರ ಜನಸಂಖ್ಯೆ ಗಿಂತಲೂ ಮಹಿಳೆಯರ ಜನಸಂಖ್ಯೆ ಹೆಚ್ಚಾಗಿರುವುದು ಕೇರಳದಲ್ಲಿ ಮಾತ್ರವೇ. 1981 ರ ಜನಸಂಖ್ಯಾ ಸಮೀಕ್ಷೆಯ ಪ್ರಕಾರ ಅಲ್ಲಿ ಪ್ರತಿ ಒಂದು ಸಾವಿರಕ್ಕೆ 30 ಶಿಶುಗಳು. ಆದರೆ ಅಧಿಕ ಅನಕ್ಷರಸ್ಥ ಮಹಿಳೆಯರನ್ನು ಹೊಂದಿರುವ ಒರಿಸ್ಸಾ ಮತ್ತು ಮಧ್ಯ ಪ್ರದೇಶಗಳಲ್ಲಿ ಈ ಸಂಖ್ಯೆ ಅನುಕ್ರಮವಾಗಿ 126 ಮತ್ತು 122ರಷ್ಟಿದೆ. ಆಧುನಿಕ ಜಗತ್ತಿನಲ್ಲಿ ಪೌಷ್ಟಿಕಾಂಶದ ಕೊರತೆಯಿಂದಾಗುವ ಶಿಶುಗಳ ಸಾವಿನ ಪ್ರಮಾಣ ಒಂದು ನೂರು ಮೀರಿರುವುದು ರಾಷ್ಟ್ರಕ್ಕೆ ಗೌರವ ತರುವ ವಿಚಾರವಲ್ಲ.

ಭಾರತ ಕ್ರಿ. ಶ. 2000ದ ವೇಳೆಗೆ ತನ್ನ ಜನಸಂಖ್ಯೆ ಬೆಳವಣಿಗೆಯ ಪ್ರಮಾಣ ವನ್ನು 21ಕ್ಕೆ ಇಳಿಸಲು ಹೆಣಗಾಡುತ್ತಿದ್ದರೆ, ಕೇರಳದಲ್ಲಿ ಈಗಾಗಲೇ ಜನನದ ಪ್ರಮಾಣ ಪ್ರತಿ ಒಂದು ಸಾವಿರಕ್ಕೆ ಕೇವಲ 18.1 ರಷ್ಟಿದೆ. ಹೆಚ್ಚಿನ ಅನಕ್ಷರಸ್ಥ ಮಹಿಳೆಯರನ್ನು ಹೊಂದಿರುವ ಉತ್ತರ ಪ್ರದೇಶ, ಬಿಹಾರ್, ಮಧ್ಯಪ್ರದೇಶ ಹಾಗೂ ರಾಜಸ್ಥಾನಗಳಲ್ಲಿ ಜನನದ ಪ್ರಮಾಣ 30ಕ್ಕೂ ಹೆಚ್ಚಾಗಿದೆ !

ಹೆಚ್ಚು ಅನಕ್ಷರಸ್ಥ ಮಹಿಳೆಯರಿರುವ ರಾಜ್ಯಗಳಲ್ಲಿ ಬೆಳೆದು ಬಂದಿರುವ ಸಂಪ್ರ ದಾಯಗಳು ಭೀಕರವಾಗಿವೆ. ರಾಷ್ಟ್ರದಲ್ಲಿ ಅತ್ಯಂತ ಕಡಿಮೆ ಮಹಿಳಾ ಅನಕ್ಷರಸ್ಥರನ್ನು ಹೊಂದಿರುವ ರಾಜಸ್ಥಾನದಲ್ಲಿ ರೂಪಾ ಕನ್ವರ್ ಎಂಬ ಯುವತಿ ಸತಿ ಸಹಗಮನಕ್ಕೆ ಬಲಿಯಾಗಬೇಕಾಯಿತಲ್ಲದೆ, ಇಡೀ ರಾಜ್ಯ ಈ ದುರಂತವನ್ನು ಸಂಪ್ರದಾಯವೆಂದು ಆಚರಿಸಿದ ದುರಂತವನ್ನೂ ಕಾಣಬೇಕಾಯಿತು.

ಕರ್ನಾಟಕದಲ್ಲೂ, ಅನಕ್ಷರಸ್ಥ ಮಹಿಳೆಯರು ಹೆಚ್ಚಾಗಿರುವ ಉತ್ತರ ಕರ್ನಾಟ ಕದ ಜಿಲ್ಲೆಗಳಾದ ರಾಯಚೂರು, ಬಳ್ಳಾರಿ. ಗುಲ್ಬರ್ಗ, ಬೀದರ್, ಬಿಜಾಪುರ ಮತ್ತು ಬೆಳಗಾಂಗಳಲ್ಲಿ ದೇವರ ಹೆಸರಿನಲ್ಲಿ ಮುಗ್ಧ ಹೆಣ್ಣುಮಕ್ಕಳನ್ನು ವೇಶ್ಯಾವಾಟಿಕೆಗೆ ತಳ್ಳ ಲಾಗುತ್ತಿದೆ.

ಆತ್ಮಸ್ಥೈರ್ಯವುಳ್ಳ ದೃಢ ಮಹಿಳೆಯರನ್ನು ರೂಪಿಸಲು ಮಹಿಳಾ ಅನಕ್ಷರ ತೆಯ ನಿರ್ಮೂಲನೆಯೇ ಮೊದಲ ಹೆಜ್ಜೆಯಾಗಬೇಕು. ಈ ಹೆಜ್ಜೆ ಮಹಿಳೆಗೆ ಸಹಿ ಮಾಡುವಷ್ಟು ಅಕ್ಷರ ಜ್ಞಾನ ನೀಡುವುದಕ್ಕಿಂತಲೂ ಹೆಚ್ಚಾಗಿ ಆಕೆಯನ್ನು ಪುರುಷ ಪ್ರಧಾನ ವ್ಯವಸ್ಥೆ ಸಂಕೋಲೆಗಳಿಂದ ಬಿಡುಗಡೆಗೊಳಿಸುವ ಸಾಧನವಾದರೆ ಮಾತ್ರ ಸಾಕ್ಷರತಾ ಆಂದೋಲನ ಅರ್ಥಪೂರ್ಣವಾಗುತ್ತದೆ.

ಮಹಿಳಾ ಸಾಕ್ಷರತೆಯ ಪ್ರಯತ್ನಗಳು ಮಹಿಳೆಯರ ಸ್ವಾತಂತ್ರ್ಯ ಮತ್ತು ಸಮಾನತೆಯ ದಿಕ್ಕಿನಲ್ಲಿ ಸಾಗಬೇಕೆಂದರೆ ಅದು ಜನಾಂದೋಳನವಾಗಬೇಕು. ಜನತೆಯ

ನಡುವಿನಿಂದ ಮೂಡಿ ಬರಬೇಕು. ಸಾಕ್ಷರತಾ ಆಂದೋಲನವು ಎಲ್ಲ ವರ್ಗಗಳ ಅನಕ್ಷರಸ್ಥರ ಜೀವನದ ಬೆಳಕಾಗಬೇಕಾದುದು ನಿಜವಾದರೂ ಲಿಂಗ ಆಧಾರಿತ ಅಸಮಾನತೆಗೆ ಸಿಲುಕಿರುವ ಮಹಿಳೆಯರ ವಿಶೇಷ ಸಮಸ್ಯೆಗಳ ಪರಿಹಾರಕ್ಕಾಗಿ ಪ್ರತ್ಯೇಕ ಮಹಿಳಾ ಸಾಕ್ಷರತಾ ಆಂದೋಲನ ನಡೆಯಬೇಕಿರುವುದು ಇಂದಿನ ತುರ್ತು ಅಗತ್ಯ.

ಇಂತಹ ಸಾಮೂಹಿಕ ಸಾಕ್ಷರತಾ ಆಂದೋಲನವು ಏಕಾಂಗಿ ಮಹಿಳೆಯರನ್ನು ಹೊರ ಜಗತ್ತಿಗೆ ಕರೆತರಬಲ್ಲದು; ಸಾರ್ವಜನಿಕ ಸಭೆ-ವೇದಿಕೆಗಳಲ್ಲಿ ಪರಸ್ಪರ ಚರ್ಚೆಗೆ, ಅನುಭವಗಳ ವಿನಿಮಯಕ್ಕೆ ನೆರವಾಗಬಲ್ಲದು. ಅವರ ಹಿಂದುಳಿದಿರುವಿಕೆ ಮತ್ತು ಶೋಷಣೆಗೆ ಕಾರಣಗಳನ್ನು ಅವರೇ ಪತ್ತೆ ಮಾಡಿಕೊಳ್ಳುವುದರಿಂದ ಸಂಘಟಿತ ಹೋರಾಟದ ಅಗತ್ಯ ಮತ್ತು ಮಹತ್ವವನ್ನೂ ಅವರು ಮನಗಾಣುವುದು ಸಾಧ್ಯವಾಗುತ್ತದೆ. ಈ ಸಂದರ್ಭಗಳಲ್ಲಿ ಅವರ ಮನದಲ್ಲಿ ಮೂಡುವ ಬದಲಾವಣೆಯು ಬಯಕೆ ಮುಂದಿನ ಹೋರಾಟವನ್ನು ರೂಪಿಸಲು ವೇದಿಕೆಯಾಗುತ್ತದೆ.

ಅಕ್ಷರಸ್ಥರಾದ ಮಹಿಳೆಯರು ತಮ್ಮ ಕುಟುಂಬ ಹಾಗೂ ಸಮಾಜದ ಸುಧಾರಣೆಗೆ ಯಾವ ರೀತಿಯಲ್ಲಿ ಶ್ರಮಿಸುತ್ತಾರೆಂಬುದಕ್ಕೆ ಆಂಧ್ರಪ್ರದೇಶದ ನೆಲ್ಲೂರಿನಲ್ಲಿ ನಡೆಯುತ್ತಿರುವ ಮದ್ಯಪಾನ ವಿರೋಧಿ ಚಳವಳಿ ಅತ್ಯುತ್ತಮ ಉದಾಹರಣೆ. ನೆಲ್ಲೂರಿನ ನವ ಸಾಕ್ಷರ ಮಹಿಳೆಯರು ಕುಡುಕ ಪುರುಷರಿಂದ ಬೇಸತ್ತು ಇಂದು ತಮ್ಮ ಮದ್ಯದ ದೊರೆಗಳಿಗೆ ಸವಾಲಾಗಿ ನಿಂತಿದ್ದಾರೆ. ಅಲ್ಲಿನ ಮದ್ಯದಂಗಡಿಗಳು ಸ್ವತಃ ಬಾಗಿಲು ಮುಚ್ಚಬೇಕು ಇಲ್ಲವೇ ನವಸಾಕ್ಷರ ಮಹಿಳೆಯರ ಬೆಂಕಿಗೆ ಆಹುತಿಯಾಗಬೇಕು ಎಂಬ ಪರಿಸ್ಥಿತಿ ಮೂಡಿದೆ.

ಕೋಮು ವಾದದ ವಿರುದ್ಧದ ಹೋರಾಟದಲ್ಲೂ ಪ್ರಜ್ಞಾವಂತ ಮಹಿಳೆಯ ಪಾತ್ರ ಹಿರಿದಾಗಿದೆ. ಪ್ರಶ್ನಾತೀತವೆನಿಸಿದ ಸಾಂಪ್ರದಾಯಿಕ ಸಂಕೋಲೆಗಳಿಂದ ನೊಂದು ಬೆಂದಿರುವ ಮಹಿಳೆ ಮಾತ್ರ ಕೋಮುವಾದದ ಬಿಗಿ ಮುಷ್ಟಿಯಲ್ಲಿರುವ ಫ್ಯಾಸಿಸ್ಟ್ ಮನೋಭಾವವನ್ನು ಸರಿಯಾಗಿ ಅರಿಯಬಲ್ಲಳು.

ಜ್ಞಾನದ ಜಗತ್ತಿಗೆ ಬಾಗಿಲು ತೆರೆಯುವ ಅಕ್ಷರಗಳು ಮಹಿಳೆಯರ ಆತ್ಮವಿಶ್ವಾಸವನ್ನು, ಆತ್ಮಾಭಿಮಾನವನ್ನು ಹೆಚ್ಚಿಸಬಲ್ಲವು. ಭಾರತದ ಪ್ರಥಮ ಸಂಪೂರ್ಣ ಅಕ್ಷರಸ್ಥ ರಾಜ್ಯವಾದ ಕೇರಳವನ್ನು ಸಾಂಪ್ರದಾಯಿಕವಾಗಿ 'ಅಕ್ಷರಸ್ಥ ರಾಜ್ಯ' ಎಂದು ಘೋಷಿಸಿದರು ಅಲ್ಲಿನ ನವಸಾಕ್ಷರ ಮಹಿಳೆ, 59 ವರ್ಷ ವಯಸ್ಸಿನ ಆಯೇಷಾ "ಅಕ್ಷರ

ಎಂಬುದು ಒಂದು ಅಸ್ತ್ರ. ಅದನ್ನು ಕೈಗೆತ್ತಿಕೊಳ್ಳದಿದ್ದರೆ ನೀವು ಗುಲಾಮರಾಗುತ್ತೀರಿ ಎಂದು ಘೋಷಿಸಿದರು. ಆರು ಜನ ಮಕ್ಕಳ ತಾಯಿಯಾದ ವಿಧವೆ ಆಯೇಷಾ ಅಕ್ಷರ ಕಲಿತ ನಂತರ ತಾವು "ಮರು ಹುಟ್ಟು ಪಡೆದಂತಾಯ್ತು" ಎಂದರು. ನವ ಸಾಕ್ಷರರ ನಿರಂತರ ಕಲಿಕೆ ಕೇಂದ್ರಗಳನ್ನು ಮುಚ್ಚುವುದಾಗಿ ಘೋಷಿಸಿದ ಸರ್ಕಾರಕ್ಕೆ, "ನೀವು ನಿಮ್ಮ ಯೋಜನೆಗಳನ್ನು ನಮ್ಮಿಂದ ಕಸಿಯಬಹುದು. ಆದರೆ ನಮ್ಮ ಅಕ್ಷರ ಜ್ಞಾನವನಲ್ಲ" ಎಂದು ಸವಾಲು ಹಾಕಿದರು. ತಮ್ಮ ಇಳಿವಯಸ್ಸಿನಲ್ಲಿ ಅಕ್ಷರ ಕಲಿತ ಆಕೆ ಪ್ರಗತಿಪರ ಧೋರಣೆಗಳನ್ನು ಹೊಂದಿದ್ದಾರೆ. ಬಾಯಿಮಾತಿನಲ್ಲಿ ವಿಚ್ಛೇದನ ಹೇಳುವ ಪದ್ಧತಿ, ವರದಕ್ಷಿಣೆ ಪದ್ಧತಿಗಳನ್ನು ಕಟುವಾಗಿ ವಿರೋಧಿಸುತ್ತಾರೆ.

ಅನಕ್ಷರಸ್ಥಳಾದ ಷಾಬಾನು ತನ್ನ ಜೀವನಾಂಶಕ್ಕಾಗಿ ನ್ಯಾಯಾಂಗದ ಎದುರು ಕೈಯೊಡ್ಡಿ ನಿಂತು ಏಕಾಂಗಿಯಾಗಿ ಹೋರಾಡುವ ಮತೀಯ ಮೂಲಭೂತವಾದಿಗಳ ಅಟ್ಟಹಾಸಕ್ಕೆ ಸಿಲುಕಿದ ಉದಾಹರಣೆ ಒಂದು ಕಡೆಯಾದರೆ, ನವಸಾಕ್ಷರ ಮಹಿಳೆಯರು ಹೆಂಡದ ದೊರೆಗಳ ವಿರುದ್ಧ ಯುದ್ಧ ಸಾರಿ ಪ್ರಗತಿಯ ಕಡೆಗಿನ ಹಾದಿ ತೋರಿದ್ದಾರೆ.

ಕೇಂದ್ರ ಸರಕಾರವು ಸಂವಿಧಾನದ 72 ಮತ್ತು 73ನೇ ತಿದ್ದುಪಡಿಗಳ ಮೂಲಕ ಸ್ಥಳೀಯ ಸಂಸ್ಥೆಗಳಲ್ಲಿ ಮಹಿಳೆಯರಿಗೆ ಶೇಕಡಾ 33ರಷ್ಟು ಸ್ಥಾನ ಮೀಸಲ್ಪಟ್ಟಿರುವ ಈ ಸಂದರ್ಭದಲ್ಲಿ ಭಾರತದ ಪ್ರತಿಯೊಬ್ಬ ಮಹಿಳೆಯನ್ನು ಅಕ್ಷರಸ್ಥಳನ್ನಾಗಿ ಮಾಡುವ ಅಗತ್ಯ ತ್ವರ್ತಾಗಿ ಕಾಣುತ್ತಿದೆ. ಅಕ್ಷರಸ್ಥರಾದ ಹಾಗೂ ರಾಜಕೀಯ ಪ್ರಜ್ಞೆಯುಳ್ಳ ಮಹಿಳೆಯರು ಇನ್ನಾದರೂ ರೂಪುಗೊಳ್ಳದಿದ್ದರೆ, ಈ ಮೀಸಲಾತಿ ಅಪ್ರಯೋಜಕ ವಾಗುತ್ತದೆ.

ದಶಕಗಳಿಂದಲೂ ಆರೋಗ್ಯ, ಕಾನೂನು, ಆರ್ಥಿಕ ಕ್ಷೇತ್ರಗಳ ಸೌಲಭ್ಯಗಳಿಂದ ವಂಚಿತಳಾರುವ ಮಹಿಳೆ ಇದೀಗ ಕಷ್ಟಪಟ್ಟು ಗಳಿಸಿರುವ ಈ ರಾಜಕೀಯ ಹಕ್ಕನ್ನು ಅರ್ಥಪೂರ್ಣವಾಗಿ ಬಳಸಬೇಕೆಂದರೆ, ಆಕೆ ಇನ್ನಾದರೂ ಅಕ್ಷರ ಜ್ಞಾನದಿಂದ ಸಜ್ಜಾಗ ಬಾರದೆ ?



ಅನುಬಂಧ—1

## ಸಾಕ್ಷರತಾ ಪ್ರಮಾಣ-ಭಾರತ : 1951-1991

| 1 | 2 | 3 | 4 |
|---|---|---|---|
| ವರ್ಷ | ಜನರ ಪ್ರಮಾಣ | ಪುರುಷರು | ಮಹಿಳೆಯರು |
| 1951 | 18.33 | 27.16 | 8.86 |
| 1961 | 28.31 | 40.40 | 15.34 |
| 1971 | 34.45 | 45.95 | 21.97 |
| 1981 | 43.56 | 56.37 | 29.75 |
| 1991 | 52.11 | 63.86 | 39.42 |

## ಅಕ್ಷರಸ್ಥರು ಮತ್ತು ಅನಕ್ಷರಸ್ಥರ ಸಂಖ್ಯೆ : 1981-1991

| 1 | 2 | 3 | 4 |
|---|---|---|---|
| ಅಕ್ಷರಸ್ಥರು | ಒಟ್ಟು ಜನರ ಸಂಖ್ಯೆ | ಪುರುಷರು | ಮಹಿಳೆಯರು |
| 1981 | 23,39,47,000 | 15,69,53,000 | 7,69,94,000 |
| 1991 | 35,20,82,000 | 22,42,88,000 | 12,77,94,000 |
| ಒಂದು ದಶಕದಲ್ಲಾದ ಹೆಚ್ಚಳ | 11,81,35,000 | 6.73,35,000 | 5,08,00,000 |
| ಅನಕ್ಷರಸ್ಥರು | | | |
| 1981 | 30,19,33,000 | 12,09,02,000 | 18,10,31,000 |
| 1991 | 32,40,30,000 | 12,66,94,000 | 19,73,36,000 |
| ಒಂದು ದಶಕದಲ್ಲಾದ ಹೆಚ್ಚಳ | 2,20,97,000 | 57,92,000 | 1,63,05,000 |

ಅನುಬಂಧ–2

## 1901 ರಿಂದ 1991 ರವರೆಗೆ ಭಾರತದಲ್ಲಿ ಸಾಕ್ಷರತೆಯ ಪ್ರಮಾಣ (ಶೇಕಡಾವಾರು)

| ವರ್ಷ | ಒಟ್ಟು ಜನರ ಪ್ರಮಾಣ | ಪುರುಷರು | ಸ್ತ್ರೀಯರು |
|---|---|---|---|
| 1901 | 5.35 | 9.83 | 0.60 |
| 1911 | 5.92 | 10.56 | 1.05 |
| 1921 | 7.16 | 12.21 | 1.81 |
| 1931 | 9.50 | 15.59 | 2.93 |
| 1941 | 16.10 | 24.90 | 7.30 |
| 1951 | 16.67 | 24.95 | 7.93 |
| 1961 | 24.02 | 34.44 | 12.95 |
| 1971 | 29.45 | 39.45 | 18.69 |
| 1981 | 36.17 | 46.74 | 24.88 |
| 1991 | 52.01 | 63.86 | 39.42 |

ಅನುಬಂಧ—3

## ಕರ್ನಾಟಕದಲ್ಲಿ ನಗರ ಪ್ರದೇಶದ ಜಿಲ್ಲಾವಾರು ಜನಸಂಖ್ಯೆ ಮತ್ತು ಅಕ್ಷರಸ್ಥರ ಅಂಕಿ-ಸಂಖ್ಯೆಗಳು

| ಕ್ರಮ ಸಂಖ್ಯೆ | ಜಿಲ್ಲೆ | ಅಕ್ಷರಸ್ಥರು | ಅಕ್ಷರಸ್ಥ ಪುರುಷರು | ಅಕ್ಷರಸ್ಥ ಮಹಿಳೆಯರು | ಒಟ್ಟು ಅಕ್ಷರಸ್ಥರ ಶೇಕಡಾ ಪ್ರಮಾಣ |
|---|---|---|---|---|---|
| 1. | ಬೆಂಗಳೂರು | 2843870 | 1613230 | 1230640 | 79.33 |
| 2. | ಬೆಂಗಳೂರುಗ್ರಾಮೀಣ | 172138 | 98639 | 73499 | 67.39 |
| 3. | ಬೆಳಗಾವಿ | 525593 | 307802 | 217791 | 73.59 |
| 4. | ಬಳ್ಳಾರಿ | 286337 | 173586 | 112751 | 60.93 |
| 5. | ಬೀದರ್ | 135187 | 82943 | 52244 | 68.02 |
| 6. | ಬಿಜಾಪುರ | 391309 | 237449 | 153960 | 61 82 |
| 7. | ಚಿಕ್ಕಮಗಳೂರು | 115954 | 64601 | 51353 | 78.59 |
| 8. | ಚಿತ್ರದುರ್ಗ | 365260 | 211525 | 153735 | 73.52 |
| 9. | ದಕ್ಷಿಣಕನ್ನಡ | 563231 | 301491 | 261740 | 84.51 |
| 10. | ಧಾರವಾಡ | 721029 | 423170 | 297859 | 70.20 |
| 11. | ಗುಲ್ಬರ್ಗ | 318322 | 195305 | 123017 | 64.36 |
| 12. | ಹಾಸನ | 181705 | 101274 | 80431 | 77.76 |
| 13. | ಕೊಡಗು | 55695 | 30532 | 25163 | 83.27 |
| 14. | ಕೋಲಾರ | 325046 | 183549 | 141497 | 74.09 |
| 15. | ಮಂಡ್ಯ | 156679 | 89612 | 67067 | 68.46 |
| 16. | ಮೈಸೂರು | 594025 | 332022 | 262003 | 73.50 |
| 17. | ರಾಯಚೂರು | 220767 | 137674 | 83093 | 56.38 |
| 18. | ಶಿವಮೊಗ್ಗ | 338540 | 189059 | 149485 | 78.01 |
| 19. | ತುಮಕೂರು | 247486 | 143400 | 104086 | 75.61 |
| 20. | ಉತ್ತರಕನ್ನಡ | 204400 | 113216 | 91184 | 81.10 |

ಅನುಬಂಧ–4

## ಕರ್ನಾಟಕ ರಾಜ್ಯದ ವಿವಿಧ ಜಿಲ್ಲೆಗಳ ಶೇಕಡವಾರು ಸಾಕ್ಷರತೆ (1991ರ ಜನಗಣತಿ ಆಧಾರಿತ)

| ಕ್ರಮ ಸಂಖ್ಯೆ | ಜಿಲ್ಲೆಗಳು | ಒಟ್ಟು ಸಾಕ್ಷರತಾ ಪ್ರಮಾಣ | ಗ್ರಾಮಾಂತರ ಪ್ರದೇಶ | | | ನಗರ ಪ್ರದೇಶ | | |
|---|---|---|---|---|---|---|---|---|
| | | | ಟಿ | ಪುರುಷರು | ಮಹಿಳೆಯರು | ಟಿ | ಪುರುಷರು | ಮಹಿಳೆಯರು |
| 1 | 2 | 3 | 4 | 5 | 6 | 7 | 8 | 9 |
| 1. | ಬೆಂಗಳೂರು | 68.05 | 56.68 | 57.2 | 36.69 | 79.33 | 73.61 | 62.22 |
| 2. | ಬೆಂಗಳೂರು ಗ್ರಾಮಾಂತರ | 56.88 | 46.37 | 49.54 | 28.20 | 67.39 | 62.90 | 50.18 |
| 3. | ಬೆಳಗಾಂ | 60.03 | 46.47 | 50.23 | 25.50 | 73.59 | 70.95 | 53.39 |
| 4. | ಬಳ್ಳಾರಿ | 49.82 | 38.71 | 41.79 | 19.36 | 60.93 | 59.91 | 41.05 |
| 5. | ಬೀದರ್ | 53.73 | 39.43 | 42.70 | 19.44 | 68.02 | 64.12 | 44.90 |
| 6. | ಬಿಜಾಪುರ | 53.66 | 50.91 | 53.04 | 28.41 | 68.42 | 67.12 | 45.39 |
| 7. | ಚಿಕ್ಕಮಗಳೂರು | 68.02 | 57.46 | 57.75 | 40.35 | 78.59 | 72.80 | 61.72 |
| 8. | ಚಿತ್ರದುರ್ಗ | 61.11 | 48.69 | 50.96 | 29.37 | 73.52 | 68.76 | 54.70 |
| 9. | ದಕ್ಷಿಣ ಕನ್ನಡ | 78.44 | 72.37 | 68.95 | 55.14 | 84.51 | 79.15 | 68.57 |
| 10. | ಧಾರವಾಡ | 66.27 | 52.34 | 54.73 | 30.41 | 70.20 | 67.04 | 49.92 |
| 11. | ಗುಲ್ಬರ್ಗ | 47.36 | 30.36 | 34.99 | 12.71 | 64.36 | 61.66 | 41.97 |
| 12. | ಹಾಸನ | 65.08 | 52.40 | 55.23 | 33.60 | 77.76 | 72.08 | 60.83 |

| 1 | 2 | 3 | 4 | 5 | 6 | 7 | 8 | 9 |
|---|---|---|---|---|---|---|---|---|
| 13. | ಕೊಡಗು | 74.38 | 65.50 | 61.99 | 49.77 | 83.27 | 75.93 | 66.69 |
| 14. | ಕೋಲಾರ | 58.63 | 43.16 | 47.54 | 24.3 | 74.09 | 69.33 | 56.09 |
| 15. | ಮಂಡ್ಯ | 56.33 | 44.19 | 47.61 | 27.39 | 68.46 | 64.99 | 52.02 |
| 16. | ಮೈಸೂರು | 54.75 | 36.00 | 38.70 | 21.43 | 73.50 | 68.60 | 57.42 |
| 17. | ರಾಯಚೂರು | 43.40 | 30.42 | 34.89 | 13.03 | 56.38 | 55.92 | 35.52 |
| 18. | ಶಿವಮೊಗ್ಗ | 66.75 | 55.48 | 55.8 | 37.24 | 78.01 | 72.35 | 61.03 |
| 19. | ತುಮಕೂರು | 62.93 | 50.24 | 53.46 | 31.32 | 75.61 | 71.03 | 57.74 |
| 20. | ಉತ್ತರಕನ್ನಡ | 71.60 | 62.10 | 61.13 | 43.35 | 81.10 | 75.29 | 63.26 |

ಸೂಚನೆ : ಮೇಲಿನ ಪಟ್ಟಿಯನ್ನು 7 ವರ್ಷದ ಒಳಗಿನ ಮಕ್ಕಳನ್ನು ಹೊರತುಪಡಿಸಿ ಶೇಕಡಾವಾರು ಸಾಕ್ಷರತೆಯನ್ನು ಲೆಕ್ಕಾಚಾರ ಮಾಡಲಾಗಿದೆ. ಆದರೆ, ನಗರ ಮತ್ತು ಗ್ರಾಮಾಂತರ ಪ್ರದೇಶಗಳ ಶೇಕಡಾವಾರು ಸಾಕ್ಷರತೆಗೆ ಬಿಟ್ಟು ಜನಸಂಖ್ಯೆಯನ್ನು ವಿಂಗಡಿಸಲಾಗಿದೆ.

ಪ್ರಾಯೋಜಕರು



# ಕರ್ನಾಟಕ ರಾಜ್ಯ ಹಣಕಾಸು ಸಂಸ್ಥೆ

ಬೆಂಗಳೂರು

# ಸಮಿತಿ

## ರಾಜ್ಯದ ಸಮಿತಿಯ ಪದಾಧಿಕಾರಿಗಳು

### ಪ್ರಧಾನ ಸಮಿತಿ

ಮಹಾಧ್ಯಕ್ಷರು : ಶ್ರೀಮತಿ ನಾಗಮ್ಮ ಕೇಶವಮೂರ್ತಿ
ಸಚಿವರು, ಬೃಹತ್ ಮತ್ತು ಮಧ್ಯಮ ಪ್ರಮಾಣದ
ಕೈಗಾರಿಕಾ ಸಚಿವಾಲಯ

ಉಪ-ಮಹಾಧ್ಯಕ್ಷರು : ಶ್ರೀಮತಿ ರೇಣುಕಾ ವಿಶ್ವನಾಥನ್
ವ್ಯವಸ್ಥಾಪಕ ನಿರ್ದೇಶಕರು,
ಕರ್ನಾಟಕ ರಾಜ್ಯ ಹಣಕಾಸು ಸಂಸ್ಥೆ

ಶ್ರೀಮತಿ ತಾರಾ ಅಜಯ್ ಸಿಂಗ್
ನಿರ್ದೇಶಕರು, ಮಹಿಳಾ ಅಭಿವೃದ್ಧಿ ನಿಗಮ

ಶ್ರೀಮತಿ ಲಕ್ಷ್ಮಿ ನಿಜಾಮುದ್ದೀನ್
ಸಮಾಜ ಸೇವಾಕರ್ತೆ

### ಕಾರ್ಯ ನಿರ್ವಾಹಕ ಸಮಿತಿ

ಅಧ್ಯಕ್ಷರು : ಶ್ರೀಮತಿ ಎಸ್ ಜಿ. ಸುಶೀಲಮ್ಮ
ಸುಮಂಗಲಿ ಸೇವಾಶ್ರಮ

ಸಂಚಾಲಕಿ : ಶ್ರೀಮತಿ ಸತ್ಯಾ ಎಸ್
ಪತ್ರಕರ್ತೆ

ಸಹ-ಸಂಚಾಲಕಿ : ಶ್ರೀಮತಿ ಕೆ ಎಸ್ ವಿಮಲಾ
ಜನವಾದಿ ಮಹಿಳಾ ಸಂಘಟನೆ

## ಸದಸ್ಯರು

ಶ್ರೀಮತಿ ಎನ್. ಇಂದಿರಮ್ಮ
ಭಾರತ ಜ್ಞಾನ ವಿಜ್ಞಾನ ಸಮಿತಿ

ಶ್ರೀಮತಿ ಎನ್. ಗಾಯತ್ರಿ
ಜಾಗೃತಿ ಮಹಿಳಾ ಅಧ್ಯಯನ ಕೇಂದ್ರ

ಶ್ರೀಮತಿ ಉಮಾ ಕುಲಕರ್ಣಿ
ಮಹಿಳಾ ಸಮಿತಿ

ಶ್ರೀಮತಿ ವಾಣಿ ಚಟರ್ಜಿ
ವಿಜ್ಞಾನಿ, ಭಾರತೀಯ ವಿಜ್ಞಾನ ಮಂದಿರ

ಶ್ರೀಮತಿ ಅನಿತಾ ಕೌಲ್
ಅಪರ ಕಾರ್ಯದರ್ಶಿ, ಶಿಕ್ಷಣ ಇಲಾಖೆ

ಶ್ರೀಮತಿ ವಿ. ಮಂಜುಳಾ
ಸಹ ಕಾರ್ಯದರ್ಶಿ, ಆಹಾರ ಇಲಾಖೆ

ಶ್ರೀ ಎಸ್.ಎಂ. ಜಾಂದಾರೆ
ನಿರ್ದೇಶಕರು, ವಯಸ್ಕರ ಶಿಕ್ಷಣ ಇಲಾಖೆ

ಶ್ರೀ ಎಂ.ಎಚ್. ಶ್ರೀಧರಮೂರ್ತಿ
ಕಾರ್ಯದರ್ಶಿ, ಭಾರತ ಜ್ಞಾನ ವಿಜ್ಞಾನ ಸಮಿತಿ

ಶ್ರೀ ಎಚ್.ಎಸ್. ನಿರಂಜನಾರಾಧ್ಯ
ಕಾರ್ಯದರ್ಶಿ, ಕರ್ನಾಟಕ ರಾಜ್ಯ ವಿಜ್ಞಾನ ಪರಿಷತ್ತು



## ಸಮತಾ ಏಕೆ ?

ಭಾರತದಲ್ಲಿ ಪುರುಷರಿಗಿಂತ ಮಹಿಳಾ ಅನಕ್ಷರಸ್ಥರೇ ಅಧಿಕ. ಮಹಿಳಾ ಸಾಕ್ಷರತೆಯ (ಪ್ರಮಾಣ ಕೇವಲ 39.4%.) ಕಾರಣ ಶಾಲೆಗೆ ದಾಖಲಾಗದ ಮತ್ತು ಮಧ್ಯದಲ್ಲೇ ಶಾಲೆ ಬಿಟ್ಟು ದುಡಿಯಲು ತೊಡಗುವ ಹೆಣ್ಣುಮಕ್ಕಳೇ ಹೆಚ್ಚು. ಮಹಿಳೆಯರು ಎರಡನೇ ದರ್ಜೆ ಸ್ಥಾನಮಾನ ಪಡೆಯಲು, ಜಗತ್ತಿನ ದೌರ್ಜನ್ಯಗಳಿಗೆ ತುತ್ತಾಗಲು, ಸಾಂಪ್ರದಾಯಿಕ ಸಂಕೋಲೆಗಳಿಂದ ಬಂಧಿತಳಾಗಲು ಶಿಕ್ಷಣದ ಕೊರತೆಯೇ ಕಾರಣ. ಇಂತಹ ಪರಿಸ್ಥಿತಿಯಲ್ಲಿ ಮಹಿಳೆಯರ ಸಾಮಾಜಿಕ ಮತ್ತು ಆರ್ಥಿಕ ಸುಧಾರಣೆಗೆ ಸಾಕ್ಷರತಾ ಆಂಧೋಲನ ಬುನಾದಿಯಾಗಬಲ್ಲದು ಎಂಬುದನ್ನು ದೇಶದಾದ್ಯಂತ ನಡೆಯುತ್ತಿರುವ ಆಂಧೋಲನದಲ್ಲಿ ಪಾಲ್ಗೊಳ್ಳುತ್ತಿರುವ ಮಹಿಳೆಯರೇ ಸಾಕ್ಷಿಯಾಗಿದ್ದಾರೆ. ಸಂಪೂರ್ಣ ಸಾಕ್ಷರತಾ ಆಂಧೋಲನದಿಂದ ರೂಪುಗೊಂಡಿರುವ ಮಹಿಳಾ ಶಕ್ತಿ ಹೆಚ್ಚಿನ ಶಿಕ್ಷಣ ಹಾಗೂ ಸಮಾನತೆಯ ಹೋರಾಟಕ್ಕಾಗಿ ಸಿದ್ಧಪಡಿಸಲು "ಸಮತಾ" ಮಹಿಳಾ ಕಲಾ ಜಾಥ ಹಮ್ಮಿಕೊಳ್ಳಲಾಗಿದೆ.

**ಸಮತಾ** ಎಂದರೆ ಮಹಿಳೆಯರನ್ನು ಅನಕ್ಷರತೆ ಮತ್ತು ಅಜ್ಞಾನದಿಂದ ವಿಮೋಚನೆಗೊಳಿಸುವ ಹೋರಾಟ. ಈ ಹೋರಾಟದ ಹಾದಿ ಬಹುದೂರ.

ಮಹಿಳೆಯರ ಶಿಕ್ಷಣಕ್ಕಾಗಿ ಆರಂಭವಾಗಿರುವ ಈ ಹೋರಾಟ ಮಹಿಳೆಯರ ಸಮಾನತೆಗಾಗಿ ನಡೆಯಬೇಕಾದ ಮಹತ್ತರ ಹೋರಾಟದ ಒಂದು ಭಾಗ ಮಾತ್ರ. ಇದು ಮಹಿಳೆಯರನ್ನು ಅನಕ್ಷರಸ್ಥರನ್ನಾಗಿ ಮತ್ತು ಗುಲಾಮರನ್ನಾಗಿ ಇಟ್ಟಿರುವ ಶಕ್ತಿಗಳ ವಿರುದ್ಧದ ಹೋರಾಟವಾಗಬೇಕಾಗಿದೆ.

ಮಹಿಳೆಯರು ತಮ್ಮ ಮೇಲಿನ ದೌರ್ಜನ್ಯ ಮತ್ತು ಅಸಮಾನತೆಯ ವಿರುದ್ಧ ತಾವೇ ಹೋರಾಡುವಂತೆ ಮಾಡಲು ಅವರಿಗೆ ಶಿಕ್ಷಣ ನೀಡಬೇಕಾದ್ದು ಮೂಲಭೂತ ಅಗತ್ಯ ಎಂಬ ಸಂದೇಶವನ್ನು ಸಮಾಜದ ಎಲ್ಲಾ ವರ್ಗಗಳಲ್ಲಿ ಬಿತ್ತುವುದು ಸಮತಾ ಕಲಾ ಜಾಥಾದ ಮುಖ್ಯ ಉದ್ದೇಶ.

